

ಕರ್ನಾಟಕ ಸರ್ಕಾರ

# ಸವಿ ಕನ್ನಡ

## ಪ್ರಥಮ ಭಾಷೆ ಕನ್ನಡ

### ಅಭ್ಯಾಸ ಸಹಿತ ಪಠ್ಯಪುಸ್ತಕ

(ಪರಿಷ್ಕೃತ – 2022)





## ಒಂದನೆಯ ತರಗತಿ

ಕರ್ನಾಟಕ ಪಠ್ಯಪುಸ್ತಕ ಸಂಘ (ರಿ.)
೬ನೇ ಅಡ್ಡರಸ್ತೆ, ಮಲ್ಲೇಶ್ವರಂ, ಬೆಂಗಳೂರು-೫೬೦ ೦೦೩.

# ಮುನ್ನುಡಿ

೨೦೦೫ನೆಯ ರಾಷ್ಟ್ರೀಯ ಪಠ್ಯಕ್ರಮದ ಆಧಾರದ ಮೇಲೆ ರಚಿತವಾದ ಕರ್ನಾಟಕ ರಾಜ್ಯ ಪಠ್ಯವಸ್ತುವಿನ ಆಧಾರದ ಮೇಲೆ ಕರ್ನಾಟಕ ಪಠ್ಯಪುಸ್ತಕ ಸಂಘವು ೨೦೧೦ ನೇ ಸಾಲಿನಿಂದ ಒಂದನೆಯ ತರಗತಿಯಿಂದ ಹತ್ತನೆಯ ತರಗತಿವರೆಗಿನ ಪಠ್ಯಪುಸ್ತಕಗಳ ರಚನಾ ಕಾರ್ಯದಲ್ಲಿ ತೊಡಗಿದೆ. ಒಟ್ಟು ೧೨ ಭಾಷೆಗಳಲ್ಲಿ ಭಾಷಾ ಪಠ್ಯಪುಸ್ತಕಗಳನ್ನು ಹಾಗೂ ಕೋರ್ ವಿಷಯಗಳನ್ನು ೭ ಮಾಧ್ಯಮಗಳಲ್ಲಿ ರಚನೆ ಮಾಡಲಾಗುತ್ತಿದೆ. ೧ ರಿಂದ ೫ ನೆಯ ತರಗತಿಯವರೆಗೆ ಪರಿಸರ ಅಧ್ಯಯನ, ಗಣಿತ ಮತ್ತು ೬ ರಿಂದ ೧೦ ನೆಯ ತರಗತಿಯವರೆಗೆ ಕೋರ್ ವಿಷಯಗಳಾದ ಗಣಿತ, ವಿಜ್ಞಾನ ಮತ್ತು ಸಮಾಜ ವಿಜ್ಞಾನಗಳಿರುತ್ತವೆ.

**೨೦೦೫ರ ರಾಷ್ಟ್ರೀಯ ಪಠ್ಯಕ್ರಮವು ಈ ಕೆಳಗಿನ ವೈಶಿಷ್ಟ್ಯಗಳನ್ನು ಹೊಂದಿದೆ.**

- ಕಲಿಕೆಯನ್ನು ಜೀವನದ ಅವಶ್ಯಕತೆಗಳೊಂದಿಗೆ ಜೋಡಿಸುವುದು.
- ಕಂಠಪಾಠ ವಿಧಾನದಿಂದ ಕಲಿಕೆಯನ್ನು ಮುಕ್ತಗೊಳಿಸುವುದು.
- ಪಠ್ಯಪುಸ್ತಕಗಳ ಹೊರತಾಗಿ ಪಠ್ಯಕ್ರಮವನ್ನು ಶ್ರೀಮಂತಗೊಳಿಸುವುದು.
- ಜ್ಞಾನದ ಅಭಿವೃದ್ಧಿಗೆ ಕಲಿಕಾ ಅನುಭವಗಳನ್ನು ಬಳಸುವುದು.
- ಭಾರತದ ಪ್ರಜಾಸತ್ತಾತ್ಮಕ ನೀತಿಯನ್ವಯ ಮಕ್ಕಳ ಅವಶ್ಯಕತೆಗಳಿಗೆ ತಕ್ಕಂತೆ ಸ್ಪಂದಿಸುವುದು.
- ಶಿಕ್ಷಣವನ್ನು ಇಂದಿನ ಹಾಗೂ ಭವಿಷ್ಯದ ಜೀವನಾವಶ್ಯಕತೆಗಳಿಗೆ ಹೊಂದುವಂತೆ ಮಾಡುವುದು.
- ವಿಷಯಗಳ ಮೇರೆಗಳನ್ನು ಮೀರಿ ಅವುಗಳಿಗೆ ಸಮಗ್ರದೃಷ್ಟಿಯ ಬೋಧನೆಯನ್ನು ಅಳವಡಿಸುವುದು.
- ಶಾಲೆಯ ಹೊರಗಿನ ಬದುಕಿಗೆ ಜ್ಞಾನ ಸಂಯೋಜನೆ ಮಾಡುವುದು.
- ಮಕ್ಕಳಿಂದಲೇ ಜ್ಞಾನವನ್ನು ಅಭಿವೃದ್ಧಿ ಪಡಿಸುವುದು.

ನೂತನ ಪಠ್ಯಪುಸ್ತಕಗಳಲ್ಲಿ ನೂತನ ವಿಧಾನಗಳಾದ ಅಂತರ್ಗತ ವಿಧಾನ (Integrated Approach), ರಚನಾತ್ಮಕ ವಿಧಾನ (Constructive Approach) ಹಾಗೂ ಸುರುಳಿಯಾಕಾರದ ವಿಧಾನ (Spiral Approach) ಗಳನ್ನು ಅಳವಡಿಸಲಾಗಿದೆ.

ಪಠ್ಯಪುಸ್ತಕಗಳ ವಿಷಯ ಹಾಗೂ ಅಭ್ಯಾಸಗಳು ವಿದ್ಯಾರ್ಥಿಗಳನ್ನು ಯೋಚನೆ ಮಾಡುವಂತೆ ಮಾಡಿ, ಚಟುವಟಿಕೆಗಳ ಮೂಲಕ ಜ್ಞಾನ ಹಾಗೂ ಸಾಮರ್ಥ್ಯಗಳನ್ನು ಪಡೆಯುವಂತೆ ಮಾಡುವ ಪ್ರಯತ್ನ ಮಾಡಲಾಗಿದೆ. ಪಠ್ಯವಸ್ತುಗಳೊಂದಿಗೆ ಅತ್ಯಂತ ಅವಶ್ಯಕ ಜೀವನ ಮೌಲ್ಯಗಳನ್ನು ಅಂತರ್ಗತವಾಗಿ ಬಳಸಲಾಗಿದೆ. ಈ ನೂತನ ಪಠ್ಯಪುಸ್ತಕಗಳು ಪರೀಕ್ಷಾ ದೃಷ್ಟಿಯಿಂದ ರಚಿತವಾಗಿಲ್ಲ. ಬದಲಾಗಿ ಅವುಗಳು ವಿದ್ಯಾರ್ಥಿಗಳ ಸರ್ವಾಂಗೀಣ ವ್ಯಕ್ತಿತ್ವ ವಿಕಸನಕ್ಕೆ ಪೂರಕವಾಗಿವೆ. ತನ್ಮೂಲಕ ಅವರನ್ನು ಸ್ವತಂತ್ರ ಭಾರತದ ಸ್ವಸ್ಥಸಮಾಜದ ಉತ್ತಮ ಪ್ರಜೆಗಳನ್ನಾಗಿ ಮಾಡುವ ಪ್ರಯತ್ನ ನಡೆದಿದೆ.

ಭಾಷಾಕಲಿಕೆಯಲ್ಲಿ ಅತ್ಯಂತ ಮುಖ್ಯ ಗುರಿಗಳಾದ ಆಲಿಸುವುದು, ಮಾತನಾಡುವುದು, ಓದುವುದು, ಬರೆಯುವುದು ಹಾಗೂ ಆಕರಗ್ರಂಥಗಳಿಂದ ವಿಷಯ ಸಂಗ್ರಹಣೆಯಂತಹ ಕ್ಷೇತ್ರವಾರು ಸಾಮರ್ಥ್ಯಗಳಿಗೆ





ಒತ್ತು ನೀಡಲಾಗಿದೆ. ಈ ಕೌಶಲಗಳೊಂದಿಗೆ, ಸೌಂದರ್ಯಪ್ರಜ್ಞೆ, ಪ್ರಶಂಸಾ ಮನೋಭಾವ, ಮೌಲ್ಯಗಳ ಸಂವರ್ಧನೆಗೆ ಅನುವು ಮಾಡಿಕೊಡಬೇಕು. ಈ ಸಾಮರ್ಥ್ಯ ಮಕ್ಕಳಲ್ಲಿ ಬಂದಾಗ ಅವರು ಪರೀಕ್ಷೆಗಳಿಗಾಗಿ ಕಂಠಪಾಠಕ್ಕೆ ಶರಣು ಹೋಗಬೇಕಾಗಿಲ್ಲ. ಪಠ್ಯಪುಸ್ತಕವು ಭಾಷಾ ಕೌಶಲಗಳ ಸಂವರ್ಧನೆಗೆ ಒಂದು ಪೂರಕವಸ್ತುವೆಂದು ಪರಿಗಣಿಸಲು, ಮಕ್ಕಳ ಮನೋವೈಶಾಲ್ಯವನ್ನು ಬೆಳೆಸಲು, ವಿಷಯಗಳಿಗೆ ಸಂಬಂಧಿಸಿದಂತೆ ಅನೇಕ ಚಟುವಟಿಕೆಗಳನ್ನು ಪಠ್ಯಪುಸ್ತಕದಲ್ಲಿ ಒದಗಿಸಲಾಗಿದೆ. ಮಿತ್ರರೊಂದಿಗೆ ಗುಂಪುಗಳಲ್ಲಿ ಚರ್ಚೆಯ ಮೂಲಕ ಅವರ ಅಭಿವ್ಯಕ್ತಿ ಹಾಗೂ ಸಂವಹನ ಕೌಶಲಗಳ ಸಂವರ್ಧನೆಯೇ ಕಲಿಕೆ ಗುರಿಯೆಂದು ಅಂತಹ ಚಟುವಟಿಕೆಗಳಿಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಲಾಗಿದೆ. ಈ ರೀತಿಯ ಚಟುವಟಿಕೆಗಳು ಮಕ್ಕಳಲ್ಲಿ ಕಲಿಯುವ ಕಲೆ (learning to learn) ಹಾಗೂ ಕಲಿತದ್ದನ್ನು ಜೀವನದಲ್ಲಿ ಅಳವಡಿಸುವ ಶಕ್ತಿ (learning to do) ಯನ್ನು ಮಕ್ಕಳಲ್ಲಿ ವೃದ್ಧಿಮಾಡುತ್ತವೆ.

ಕರ್ನಾಟಕ ಪಠ್ಯಪುಸ್ತಕ ಸಂಘವು ಈ ಪುಸ್ತಕದ ತಯಾರಿಯಲ್ಲಿ ಸಹಕರಿಸಿದ ಸಮಿತಿಯ ಅಧ್ಯಕ್ಷರಿಗೆ, ಸದಸ್ಯರಿಗೆ, ಕಲಾಕಾರರಿಗೆ, ಪರಿಶೀಲಕರಿಗೆ, ಸಂಯೋಜಕ ಅಧಿಕಾರಿಗಳಿಗೆ, ಶಿಕ್ಷಣ ಮಹಾವಿದ್ಯಾಲಯಗಳ ಸಿಬ್ಬಂದಿ ವರ್ಗದವರಿಗೆ, ಜಿಲ್ಲಾ ತರಬೇತಿ ಸಂಸ್ಥೆಗಳಿಗೆ, ರಾಜ್ಯ ಮಟ್ಟದ ಪಠ್ಯಪುಸ್ತಕ ಸಂಪಾದಕ ಮಂಡಳಿಯ ಸದಸ್ಯರಿಗೆ ಮತ್ತು ಪುಸ್ತಕವನ್ನು ಸುಂದರವಾಗಿ ಮುದ್ರಿಸಿದ ಮುದ್ರಕರಿಗೆ ತನ್ನ ಹೃತ್ಪೂರ್ವಕ ಕೃತಜ್ಞತೆಗಳನ್ನು ಸಲ್ಲಿಸುತ್ತದೆ. ಕೆಲವು ಸಾಹಿತಿಗಳ ಹಾಗೂ ಕವಿಗಳ ಕೃತಿಗಳನ್ನು ಈ ಪಠ್ಯಪುಸ್ತಕಗಳಲ್ಲಿ ಅಳವಡಿಸಲಾಗಿದೆ. ಈ ವಿಚಾರದಲ್ಲಿ ತಮ್ಮ ಒಪ್ಪಿಗೆಯನ್ನು ನೀಡಿರುವ ಬರಹಗಾರರಿಗೆ ಹಾಗೂ ಕವಿಗಳಿಗೆ ಪಠ್ಯಪುಸ್ತಕ ಸಂಘ ಆಭಾರಿಯಾಗಿದೆ.



**ಪ್ರೊ. ಜಿ ಎಸ್ ಮುಡಂಬಡಿತ್ತಾಯ**
ಮುಖ್ಯ ಸಂಯೋಜಕರು
ಪಠ್ಯಪುಸ್ತಕ ಪರಿಷ್ಕರಣೆ ಹಾಗೂ ಪಠ್ಯಪುಸ್ತಕ ರಚನೆ
ಕರ್ನಾಟಕ ಪಠ್ಯಪುಸ್ತಕ ಸಂಘ (ರಿ.)
ಬೆಂಗಳೂರು

**ನಾಗೇಂದ್ರ ಕುಮಾರ್**
ವ್ಯವಸ್ಥಾಪಕ ನಿರ್ದೇಶಕರು
ಕರ್ನಾಟಕ ಪಠ್ಯಪುಸ್ತಕ ಸಂಘ (ರಿ.)
ಬೆಂಗಳೂರು

ಓದಿಗೆ ಮುನ್ನ....

## ಅಧ್ಯಕ್ಷರ ಮಾತು

ರಾಷ್ಟ್ರೀಯ ಶಿಕ್ಷಣ ನೀತಿ ೨೦೦೫ರ ಮಾರ್ಗದರ್ಶಿ ಸೂತ್ರಗಳು ಪಠ್ಯಪುಸ್ತಕ ಪರಿಷ್ಕಾರದ ಸಂದರ್ಭದಲ್ಲಿ ಗಮನಾರ್ಹವಾದ ಅಂಶವಾಗಿದೆ. ಸಂತಸ ಕಲಿಕೆಯನ್ನು ಗಮನದಲ್ಲಿರಿಸಿ ಪಠ್ಯ ಪುಸ್ತಕವನ್ನು ರಚಿಸಬೇಕೆಂಬುದು ಮುಖ್ಯವಾದ ಅಂಶ. ಒಂದನೆಯ ತರಗತಿಯ ಪಠ್ಯಪುಸ್ತಕವನ್ನು ರಚಿಸುವಾಗ ಮಗು ದೈನಂದಿನ ಬದುಕಿನ ಬೇರೆ ಬೇರೆ ಸನ್ನಿವೇಶಗಳಲ್ಲಿ ಭಾಷೆಯನ್ನು ಪರಿಣಾಮಕಾರಿಯಾಗಿ ಬಳಸಲು ಅಗತ್ಯವಾದ ಭಾಷಾ ಕೌಶಲಗಳಾದ ಆಲಿಸುವುದು, ಮಾತನಾಡುವುದು, ಓದುವುದು ಮತ್ತು ಬರೆಯುವುದು ಇವುಗಳನ್ನು ಸಮರ್ಥವಾಗಿ ಕಲಿಯಲು ಸಾಧ್ಯವಾಗಬೇಕೆಂಬ ಗುರಿ ಹೊಂದಲಾಗಿದೆ. ಈ ಅಗತ್ಯಗಳನ್ನು ಪೂರೈಸಲು ಅರ್ಥಮಾಡಿಕೊಂಡು ಆಲಿಸುವುದು, ಸ್ಪಷ್ಟ ಉಚ್ಚಾರಣೆಯೊಂದಿಗೆ ಮಾತನಾಡುವುದು, ಸ್ವಂತ ಆಲೋಚನೆ, ಅನಿಸಿಕೆಗಳನ್ನು ಸ್ಪಷ್ಟ ಮಾತುಗಳಲ್ಲಿ ವ್ಯಕ್ತಪಡಿಸುವುದು, ಕನ್ನಡದಲ್ಲಿ ಬಳಕೆಯಲ್ಲಿರುವ ಅಕ್ಷರಗಳನ್ನು ಪರಿಚಯ ಮಾಡಿಕೊಳ್ಳುವುದು ಮತ್ತು ಅವುಗಳನ್ನು ಅರಿತು ಬಳಸುವುದು, ನಿತ್ಯದ ವ್ಯವಹಾರಗಳಲ್ಲಿ ಬಳಸುವ ಪದಗಳನ್ನು ಸ್ವಲ್ಪ ಮಟ್ಟಿಗಾದರೂ ಪರಿಚಯಿಸಿಕೊಳ್ಳುವುದು. ಉಚ್ಚಾರ, ಒತ್ತು, ಸ್ವರಭಾರಗಳೊಡನೆ ಸಣ್ಣ ಸಣ್ಣ ವಾಕ್ಯಗಳನ್ನು ಉಚ್ಚರಿಸುವುದು ಮತ್ತು ಬರೆಯುವುದು, ಕನ್ನಡದ ಪದ್ಯಗಳನ್ನು ಭಾವಾಭಿನಯದೊಂದಿಗೆ ಹಾಡುವುದು ಇಂತಹ ನಿರ್ದಿಷ್ಟ ಗುರಿಗಳೊಂದಿಗೆ ಪುಸ್ತಕ ರಚನೆಗೆ ಕೈಹಾಕಲಾಗಿದೆ.



ಪ್ರತಿ ಪಠ್ಯವನ್ನು ರಚಿಸುವಾಗಲೂ ಸಾಮರ್ಥ್ಯವಾರು ಪಠ್ಯವಸ್ತು ರೂಪಿತವಾಗಬೇಕೆನ್ನುವುದನ್ನು ಗಮನದಲ್ಲಿಡಬೇಕಾಗಿದೆ. ಆಲಿಸುವುದು, ಮಾತನಾಡುವುದು, ಓದುವುದು ಮತ್ತು ಬರೆಯುವುದು ಈ ಕೌಶಲಗಳನ್ನು ಮಕ್ಕಳಲ್ಲಿ ಅಭಿವೃದ್ಧಿಪಡಿಸಲು ಅಗತ್ಯವಾಗುವಂತೆ ಪಾಠಗಳನ್ನು ರೂಪಿಸಲಾಗಿದೆ. ಜನಪ್ರಿಯ ಪ್ರಾಸಗೀತೆಗಳನ್ನು ಆಲಿಸುವುದು, ಅರ್ಥಮಾಡಿಕೊಳ್ಳುವುದು, ಪರಿಚಿತ ಸನ್ನಿವೇಶಗಳ ಸಂಭಾಷಣೆ ಸಂವಾದಗಳನ್ನು ಅರ್ಥಮಾಡಿಕೊಳ್ಳುವುದು, ಪಠ್ಯದ ಸರಳ ಮಾಹಿತಿಯನ್ನು ನೆನಪಿಸಿಕೊಳ್ಳುವುದು, ಆಲಿಸಿದ ನಂತರ ಸರಳವಾದ ಪ್ರಶ್ನೆಗಳಿಗೆ ಉತ್ತರಿಸುವುದು ಮುಂತಾದ ಆಲಿಸುವ ಕೌಶಲಗಳಿಗೆ ಸಂಬಂಧಿಸಿದ ಪಾಠಗಳನ್ನು ರೂಪಿಸಲಾಗಿದೆ. ಮಕ್ಕಳನ್ನು ಮಾತನಾಡಿಸುವ ಸಂದರ್ಭಕ್ಕೆ ಅಗತ್ಯವಾದ ಪಾಠಗಳನ್ನು, ಸರಳ ಪ್ರಶ್ನೆಗಳಿಗೆ ಉತ್ತರಿಸಬಹುದಾದ ಅಭ್ಯಾಸಗಳನ್ನು ರಚಿಸಲಾಗಿದೆ. ಈಗಾಗಲೇ ಕನ್ನಡದಲ್ಲಿ ಸಾರ್ವತ್ರಿಕವಾಗಿ ಒಪ್ಪಿತವಾಗಿರುವ ಮತ್ತು ಪರಂಪರೆಯಿಂದ ಬಂದಿರುವ ವರ್ಣಮಾಲೆಯ ಅಕ್ಷರಗಳನ್ನು ಅನುಕ್ರಮವಾಗಿ ಗುರುತಿಸಲು ಅಗತ್ಯವಾದ ಅಭ್ಯಾಸಗಳನ್ನು ನೀಡಲಾಗಿದೆ. ಸ್ವರ, ವ್ಯಂಜನ, ಗುಣಿತಾಕ್ಷರ ಮತ್ತು ಒತ್ತಕ್ಷರಗಳನ್ನು ನಕಲು ಮಾಡಿ ಕಲಿಯಲು ಅವಕಾಶ ಕಲ್ಪಿಸಲಾಗಿದೆ. ಪರಿಚಿತವಾದ ಪದಗಳನ್ನು, ಸರಳ ವಾಕ್ಯಗಳನ್ನು ರಚಿಸಲು ಅಗತ್ಯವಾದ ಅಭ್ಯಾಸಗಳನ್ನು ನೀಡಲಾಗಿದೆ.



ಅಕ್ಷರಗಳನ್ನು ಕಲಿಸುವ ಮೂರು ನಾಲ್ಕು ಪದ್ಧತಿಗಳು ಕನ್ನಡದಲ್ಲಿ ಮೊದಲಿನಿಂದಲೂ ಬಳಕೆಗೆ ಬಂದಿವೆ. ಇದರಲ್ಲಿ ಅಕ್ಷರಮಾಲಾ ಪದ್ಧತಿ, ರಠಈಕ ಪದ್ಧತಿ, ರೂಪಸಾಮ್ಯ ಪದ್ಧತಿ ಹಾಗೂ ಧ್ವನಿಸಾಮ್ಯ ಪದ್ಧತಿಗಳು ಪರಿಚಿತವಾದವು. ಕಳೆದ ಹಲವು ವರ್ಷಗಳಿಂದ ಬಳಕೆಯಲ್ಲಿರುವ ರೂಪಸಾಮ್ಯ ಮತ್ತು ಧ್ವನಿಸಾಮ್ಯ ಪದ್ಧತಿಯನ್ನು ಇಲ್ಲಿ ಮುಂದುವರೆಸಲಾಗಿದೆ. ಅಕ್ಷರ, ಪದ ಮತ್ತು ವಾಕ್ಯಗಳನ್ನು ಕಲಿಸಲು ಮತ್ತು ಕಲಿಯಲು ಈ ಪದ್ಧತಿ ಹೆಚ್ಚು ಅನುಕೂಲ ಎಂಬ ದೃಷ್ಟಿಯಿಂದ ಈ ಪದ್ಧತಿಯನ್ನು ಮುಂದುವರೆಸಲಾಗಿದೆ. ಧ್ವನಿ ಮತ್ತು ರೂಪಸಾಮ್ಯವಿರುವ ಅಕ್ಷರಗಳನ್ನು ಕಲಿಯುವುದರ ಮೂಲಕ ಮಕ್ಕಳು ಅಕ್ಷರದಿಂದ ನೇರವಾಗಿ ಪದಕ್ಕೆ, ಪದದಿಂದ ವಾಕ್ಯಕ್ಕೆ ಮುನ್ನಡೆಯುವ ಸಾಧ್ಯತೆ ಇದೆ. ಮೂಲಾಕ್ಷರ, ಗುಣಿತಾಕ್ಷರ, ಒತ್ತಕ್ಷರಗಳನ್ನು ಒಂದು ಕ್ರಮದಲ್ಲಿ ಯೋಜಿಸಿ ನೀಡಲಾಗಿದೆ. ಕಲಿಕೆಗೆ ಅಗತ್ಯವಾಗುವಂತೆ ಪುನರಾವರ್ತನೆಗೆ ಅಗತ್ಯವಾದ ಅಭ್ಯಾಸಗಳನ್ನು ನೀಡಲಾಗಿದೆ.

ಇಡೀ ಪುಸ್ತಕವನ್ನು ಮಕ್ಕಳನ್ನು ಗಮನದಲ್ಲಿಟ್ಟು ರಚಿಸಿದರೂ ಪುಸ್ತಕದ ಎಲ್ಲೆಡೆ ಅಧ್ಯಾಪಕರಿಗೆ ಸೂಚನೆ ನೀಡಲಾಗಿದೆ. ಒಂದನೆಯ ತರಗತಿಯ ಮಕ್ಕಳು ಶಿಕ್ಷಕರ ಮೂಲಕವೇ ಪಾಠಗಳನ್ನು ಕಲಿಯಬೇಕಾದುದರಿಂದ ಈ ರೀತಿಯ ಸೂಚನೆಗಳನ್ನು ನೀಡಲಾಗಿದೆ. ಪ್ರತೀ ಪಾಠಕ್ಕೂ ಒಂದು **'ಪಾಠಪೂರ್ವ ಚಟುವಟಿಕೆ'** ನೀಡಲಾಗಿದೆ. ಈ ಪೂರ್ವಪಾಠದಲ್ಲಿ ಸಾಮಾನ್ಯವಾಗಿ ಪಾಠಕ್ಕೆ ಪೂರಕವಾಗುವ ಚಿತ್ರಗಳನ್ನು ನೀಡಿ ಆ ಚಿತ್ರಗಳನ್ನು ಗುರುತಿಸುವುದರ ಮೂಲಕ ಮಕ್ಕಳನ್ನು ಮಾತನಾಡಿಸುತ್ತಾ ಪಾಠ ಅರ್ಥಮಾಡಿಕೊಳ್ಳಲು ಮಕ್ಕಳಿಗೆ ಪರಿಚಿತವಾದ ಸನ್ನಿವೇಶವನ್ನು ನಿರ್ಮಾಣ ಮಾಡಿ ಅದರ ಮೂಲಕ ಪಾಠವನ್ನು ಆರಂಭಿಸಲು ಸೂಚನೆ ನೀಡಲಾಗಿದೆ. ಪಾಠ ೧೫ ರಿಂದ ಮುಂದಕ್ಕೆ ಪೂರ್ವಪಾಠವಿರುವುದಿಲ್ಲ. ಮೊದಲ ನಾಲ್ಕು ಪಾಠಗಳಲ್ಲಿ ಮಕ್ಕಳನ್ನು ಮಾತನಾಡಿಸಲು ಅಗತ್ಯವಾದ ಅಭ್ಯಾಸಗಳನ್ನು ನೀಡಲಾಗಿದೆ. ಸರಳವಾದ ಪ್ರಶ್ನೆಗಳನ್ನು ಕೇಳಿ ಅವರಿಂದ ಉತ್ತರ ಪಡೆಯಲು ಸೂಚಿಸಲಾಗಿದೆ. ಐದನೆಯ ಪಾಠದಿಂದ ಬರವಣಿಗೆಯ ಕಡೆಗೆ ಗಮನ ನೀಡಲಾಗಿದೆ. ಮಕ್ಕಳಿಗೆ ಬರವಣಿಗೆ ಅಭ್ಯಾಸ ಮಾಡಲು ಅವಕಾಶ ಒದಗಿಸಲಾಗಿದೆ ಅನಂತರ ಕನ್ನಡ ಅಕ್ಷರಗಳ ಬರವಣಿಗೆಗೆ ಪೂರಕವಾದ ರೇಖಾಭ್ಯಾಸ ನೀಡಲಾಗಿದೆ. ಅಲ್ಲಲ್ಲಿ ಮಕ್ಕಳು ಚಿತ್ರಕ್ಕೆ ಬಣ್ಣ ತುಂಬಲು ಚಿತ್ರವನ್ನು ಅನುಕರಿಸಿ ಬರೆಯಲು ಹೇಳಲಾಗಿದೆ. ಇವೆಲ್ಲಾ ಬರವಣಿಗೆಯ ಅಭ್ಯಾಸಕ್ಕೆ ಪೂರಕವಾದ ಚಟುವಟಿಕೆಗಳಾಗಿರುತ್ತವೆ. ಕಲಿಕೆಯಲ್ಲಿ ಏಕತಾನತೆಯನ್ನು ತಡೆಯುವ ಉದ್ದೇಶದಿಂದ ಪಾಠ ಆರು ಮತ್ತು ಏಳನ್ನು ಅಕ್ಷರಾಭ್ಯಾಸಗಳ ನಡುವೆ ಸೇರಿಸಲಾಗಿದೆ. ಈ ಪಾಠಗಳ ಮೂಲಕ ಆಲಿಸುವ, ಮಾತನಾಡುವ ಕೌಶಲಗಳ ಮುಂದುವರಿಕೆಗೆ ಅವಕಾಶ ನೀಡಲಾಗಿದೆ. ಧ್ವನಿಸಾಮ್ಯ ಮತ್ತು ರೂಪಸಾಮ್ಯ ಪದ್ಧತಿಯ ಮೂಲಕ ಹತ್ತು ಭಿನ್ನ ಹಂತಗಳಲ್ಲಿ ಮೂಲಾಕ್ಷರಾಭ್ಯಾಸವನ್ನು ಕಲಿಸಲು ಅವಕಾಶ ಕಲ್ಪಿಸಲಾಗಿದೆ. ಈ ಎಲ್ಲ ಪಾಠಗಳ ಅಂತ್ಯದಲ್ಲಿ ಪದಗಳ ಮೂಲಕ ವಾಕ್ಯದ ನೆಲೆಗೆ ತಲುಪಲು ಅಗತ್ಯವಾದ ಅಭ್ಯಾಸಗಳನ್ನು ನೀಡಲಾಗಿದೆ. ಮುಂದೆ ಗುಣಿತಾಕ್ಷರಗಳನ್ನು ಕಾಗುಣಿತದ ಕ್ರಮದಲ್ಲಿ ನೀಡಲಾಗಿದೆ. ಈ ಗುಣಿತಾಕ್ಷರಗಳಿಗೆ ನೀಡಿರುವ ತಲೆಕಟ್ಟು ಮುಂತಾದ ಪಾರಿಭಾಷಿಕ ಶಬ್ದಗಳನ್ನು ಶಿಕ್ಷಕರನ್ನು ಉದ್ದೇಶಿಸಿ ನೀಡಲಾಗಿದೆ.





ಇತರ ಕೌಶಲಗಳೊಡನೆ ಓದುವ ಕೌಶಲವನ್ನು ಪಾಠ ಹನ್ನೊಂದರಿಂದ ಮುಂದೆ ನೀಡಲಾಗಿದೆ. ಒತ್ತಕ್ಷರವನ್ನು ಬಳಸದೆ ಸರಳ ವಾಕ್ಯಗಳನ್ನು ಮಕ್ಕಳು ಓದಲು ಸಾಧ್ಯವಾಗಬೇಕು ಎಂಬುದು ಪಾಠ ೧೧-೧೨ರ ಉದ್ದೇಶವಾಗಿದೆ. ಪಾಠ ೧೩ರಲ್ಲಿ ಸಜಾತೀಯ ಒತ್ತಕ್ಷರಗಳನ್ನು ಎರಡು ಹಂತಗಳಲ್ಲಿ ನೀಡಿ ಮೂರನೆಯ ಹಂತದಲ್ಲಿ ಭಿನ್ನರೂಪದ ಒತ್ತಕ್ಷರಗಳನ್ನು, ನಾಲ್ಕನೆಯ ಹಂತದಲ್ಲಿ ವಿಜಾತೀಯ ಒತ್ತಕ್ಷರಗಳನ್ನು ಹಾಗೂ ಅಭ್ಯಾಸಗಳನ್ನು ನೀಡಲಾಗಿದೆ. ಪಾಠ ಹದಿನಾಲ್ಕರಿಂದ ಹದಿನೇಳರವರೆಗೆ ಕಲಿಕೆಯ ನಾಲ್ಕು ಕೌಶಲಗಳನ್ನು ಒಟ್ಟಾಗಿ ಬಳಸಲು ಅನುಕೂಲವಾಗುವಂತೆ ಪಾಠಗಳನ್ನು ರೂಪಿಸಲಾಗಿದೆ. ಅಂತಿಮರೂಪವನ್ನು ನೀಡುವ ಮುನ್ನ ಪಠ್ಯಪುಸ್ತಕ ಸಂಘವು ವಿವಿಧ ಜಿಲ್ಲೆಗಳ ಡಯಟ್‌ಗಳ ಮೂಲಕ ಶಿಕ್ಷಕರಿಂದ ಹಿಮ್ಮಾಹಿತಿ ಪಡೆದಿತ್ತು. ಈ ಹಿಮ್ಮಾಹಿತಿ, ಪುಸ್ತಕವನ್ನು ತಿದ್ದುಪಡಿಗೊಳಿಸಲು ತುಂಬ ಸಹಕಾರಿಯಾಯಿತು. ಹಿಮ್ಮಾಹಿತಿ ಒದಗಿಸಿದ ಎಲ್ಲಾ ಡಯಟ್‌ಗಳ ಪ್ರಾಂಶುಪಾಲರಿಗೆ ಮತ್ತು ಶಿಕ್ಷಕರಿಗೆ ಸಮಿತಿ ಆಭಾರಿಯಾಗಿದೆ. ಪುಸ್ತಕವನ್ನು ಪರಿಶೀಲಿಸಿ ಸೂಕ್ತ ಸಲಹೆಗಳನ್ನು ನೀಡಿದ ಸಂಪಾದಕೀಯ ಮಂಡಳಿ ಸದಸ್ಯರಿಗೆ ನಮನಗಳು.

ಪಠ್ಯಪುಸ್ತಕ ಸಮಿತಿಯ ಎಲ್ಲಾ ಸದಸ್ಯರು ಹಾಗೂ ಪರಿಶೀಲಕರು ಈ ಪುಸ್ತಕದ ಮೊದಲ ಹಂತದಿಂದ ಇಲ್ಲಿಯವರೆಗೆ ಸಾಕಷ್ಟು ಆಲೋಚಿಸಿ ಪಾಠಗಳನ್ನು ರೂಪಿಸಿ ಅಗತ್ಯವಾದ ಅಭ್ಯಾಸಗಳನ್ನು ರಚಿಸಿಕೊಟ್ಟಿದ್ದಾರೆ. ಕಲಾವಿದರು ಸುಂದರವಾದ ಚಿತ್ರಗಳನ್ನು ರಚಿಸಿ ಈ ಪುಸ್ತಕಕ್ಕೆ ಒಂದು ಹೊಸ ಕಳೆ ನೀಡಿದ್ದಾರೆ. ೨೫೦ಕ್ಕೂ ಹೆಚ್ಚು ಚಿತ್ರಗಳನ್ನು ಈ ಪುಸ್ತಕದಲ್ಲಿ ಅಳವಡಿಸಲಾಗಿರುವುದನ್ನು ಗಮನಿಸಬಹುದು. ನಮ್ಮೊಡನೆ ಸಮಸಮನಾಗಿ ನಿಂತು ಈ ಪುಸ್ತಕ ರೂಪಿಸುವಲ್ಲಿ ಪಠ್ಯಪುಸ್ತಕ ಸಂಘದ ವ್ಯವಸ್ಥಾಪಕ ನಿರ್ದೇಶಕರು, ಸಂಯೋಜಕರು, ಉಪನಿರ್ದೇಶಕರು ಹಾಗೂ ಹಿರಿಯ ಸಹಾಯಕ ನಿರ್ದೇಶಕರು ಮಾರ್ಗದರ್ಶನ ಮಾಡುವುದಲ್ಲದೆ ಸಮಸ್ಯೆಗಳ ಸಂದರ್ಭದಲ್ಲಿ ಚರ್ಚಿಸಿ ಸೂಕ್ತ ಸಲಹೆಗಳನ್ನಿತ್ತಿದ್ದಾರೆ. ಇವರು ನೀಡಿದ ಸಲಹೆ ಸೂಚನೆಗಳು ತುಂಬಾ ಸಹಕಾರಿಯಾಗಿವೆ. ಇವರೆಲ್ಲರಿಗೂ ನಾನು ವೈಯಕ್ತಿಕವಾಗಿ ಕೃತಜ್ಞತೆ ಸಲ್ಲಿಸುತ್ತಿದ್ದೇನೆ.



**ಡಾ ಸತ್ಯನಾರಾಯಣ ಮಲ್ಲಿಪಟ್ಟಣ**
ಅಧ್ಯಕ್ಷರು
ಸವಿ ಕನ್ನಡ – ೧
ಪಠ್ಯಪುಸ್ತಕ ರಚನಾಸಮಿತಿ



## ಸವಿ ಕನ್ನಡ – ೧ ಪಠ್ಯಪುಸ್ತಕ ರಚನಾ ಸಮಿತಿ

**ಅಧ್ಯಕ್ಷರು**

**ಡಾ ಸತ್ಯನಾರಾಯಣ ಮಲ್ಲಿಪಟ್ಟಣ,** ಸಂಯೋಜಕ ಪ್ರಾಧ್ಯಾಪಕರು, ವಿಶ್ವವಿದ್ಯಾನಿಲಯ ಕಾಲೇಜು, ಮಂಗಳೂರು–೧

**ಸದಸ್ಯರು**

**ಶ್ರೀ ಸಿ. ಎಸ್. ಬನಶಂಕರಯ್ಯ,** ನಿವೃತ್ತ ಶಿಕ್ಷಕರು, ಅಶೋಕನಗರ, ಬೆಂಗಳೂರು–೫೦

**ಶ್ರೀ ವೆಂಕಟೇಶ್ ಎಚ್. ಲಕ್ಷಾಣಿ,** ಸ.ಶಿ., ಎ.ವಿ.ಸ್ಮಾರಕ ಸಂಯುಕ್ತ ಪ.ಪೂ. ಕಾಲೇಜು, ಧಾರವಾಡ.

**ಡಾ॥ ರಘುಶಂಖ ಭಾತಂಬ್ರ,** ಸ.ಶಿ., ಸರ್ಕಾರಿ ಪ್ರೌಢಶಾಲೆ, ನೌಬಾದ್ ಬೀದರ್–೧

**ಶ್ರೀಮತಿ ಕೆ. ವಿಜಯಲಕ್ಷ್ಮಿದೇವಿ,** ನಿವೃತ್ತ ಶಿಕ್ಷಕಿ, ನಂ.೩೫೯, ರಾಜಾಜಿನಗರ, ಬೆಂಗಳೂರು–೧೦

**ಶ್ರೀ ನೀಲಾವರ ಸುರೇಂದ್ರ ಅಡಿಗ,** ಸ.ಶಿ. ಕುವೆಂಪು ಶತಮಾನೋತ್ಸವ ಮಾ.ಪ್ರಾ. ಶಾಲೆ, ಕುಂದಾಪುರ ತಾ॥

**ಕಲಾವಿದರು : ಶ್ರೀ ಜಿ ಎಂ ಜಂಗಿ (ರ. ಬನಹಟ್ಟಿ),** ಕಲಾವಿದರು, ಡಿ.ಎಸ್.ಇ.ಆರ್.ಟಿ, ಬೆಂಗಳೂರು–೮೫

**ಪರಿಶೀಲಕರು :**

**ಶ್ರೀ ಕೆ ಎಂ ಲಿಂಗೇಗೌಡ,** ಉಪನ್ಯಾಸಕರು, ಸರ್ಕಾರಿ ಪ.ಪೂ. ಕಾಲೇಜು, ಮೈಲಾರ ಪಟ್ಟಣ, ನಾಗಮಂಗಲ ತಾ॥

**ಸಂಪಾದಕೀಯ ಮಂಡಳಿ ಸದಸ್ಯರು**

**ಪ್ರೊ॥ ಸಾ.ಶಿ. ಮರುಳಯ್ಯ,** ಸಾಹಿತಿಗಳು, ರಾಗಿಣಿ, ಹಂಪಿನಗರ, ಬೆಂಗಳೂರು.

**ಪ್ರೊ॥ ಅ.ರಾ.ಮಿತ್ರ,** ಸಾಹಿತಿಗಳು, ಕೆ.ಎಚ್.ಬಿ. ಕಾಲೋನಿ, ಯಲಹಂಕ, ಬೆಂಗಳೂರು.

**ಡಾ॥ ವಿಷ್ಣು ಎಂ. ಶಿಂದೆ,** ಸಹಾಯಕ ಪ್ರಾಧ್ಯಾಪಕರು, ಶಿಕ್ಷಣ ವಿಭಾಗ, ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾನಿಲಯ, ವಿಜಯಪುರ.

**ಮುಖ್ಯ ಸಂಯೋಜಕರು :**

**ಪ್ರೊ. ಜಿ.ಎಸ್. ಮುಡಂಬಡಿತ್ತಾಯ,** ಸಂಯೋಜಕರು, ಪಠ್ಯಕ್ರಮ ಪರಿಷ್ಕರಣೆ ಮತ್ತು ಪಠ್ಯಪುಸ್ತಕ ರಚನೆ, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು.

**ಸಲಹೆ ಮತ್ತು ಮಾರ್ಗದರ್ಶನ :**

**ಶ್ರೀ ನಾಗೇಂದ್ರ ಕುಮಾರ್,** ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು.

**ಶ್ರೀಮತಿ ಸಿ.ನಾಗಮಣಿ,** ಉಪನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು.

**ಕಾರ್ಯಕ್ರಮ ಸಂಯೋಜಕರು :**

**ಶ್ರೀ ಪಾಂಡುರಂಗ,** ಹಿರಿಯ ಸಹಾಯಕ ನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು.





## ಪಠ್ಯಪುಸ್ತಕ ಪರಿಷ್ಕರಣಾ ಸಮಿತಿಗಳ ವಿವರ

**ಸರ್ವಾಧ್ಯಕ್ಷರು :**

**ಪ್ರೊ. ಬರಗೂರು ರಾಮಚಂದ್ರಪ್ಪ.** ರಾಜ್ಯಪಠ್ಯಪುಸ್ತಕ ಪರಿಷ್ಕರಣಾ ಸಮಿತಿ, ಕರ್ನಾಟಕ ಪಠ್ಯಪುಸ್ತಕಸಂಘ(ರಿ), ಬೆಂಗಳೂರು.

### ಪರಿಷ್ಕರಣಾ ಸಮಿತಿ

**ಅಧ್ಯಕ್ಷರು**

**ಡಾ. ರಾಜಪ್ಪ ದಳವಾಯಿ,** ಪ್ರಾಧ್ಯಾಪಕರು, ಕನ್ನಡ ವಿಭಾಗ, ಸ್ನಾತಕೋತ್ತರ ಕೇಂದ್ರ, ಕೋಲಾರ, ಬೆಂಗಳೂರು ವಿಶ್ವವಿದ್ಯಾಲಯ.

**ಸದಸ್ಯರು**

**ಡಾ. ಜಗನ್ನಾಥ್. ಹೆಬ್ಬಾಳೆ** ಸಹ ಪ್ರಾಧ್ಯಾಪಕರು, ಕರ್ನಾಟಕ ಕಲಾ, ವಾಣಿಜ್ಯ ಪ್ರಥಮದರ್ಜೆ ಕಾಲೇಜು, ಬೀದರ್

**ಶ್ರೀ. ಅಲ್ಲಮಪ್ರಭು ಬೆಟ್ಟದೂರು,** ನಿವೃತ್ತ ಪ್ರಾಂಶುಪಾಲರು, ಅಮರ ಚೇತನ, ತವಳಗೇರಿ ಕಾಲೋನಿ, ಕಲ್ಯಾಣನಗರ, ಕೊಪ್ಪಳ.

**ಶ್ರೀ. ವಿ.ರಂಗಪ್ಪಯ್ಯಹೊಳ್ಳ,** ನಿವೃತ್ತ ಕನ್ನಡ ಭಾಷಾ ಶಿಕ್ಷಕರು, ಶ್ರೀನಿವಾಸ ಚಿತ್ರಪಾಡಿ, ಸಾಲಿಗ್ರಾಮ, ಉಡುಪಿ ತಾ.

**ಶ್ರೀ. ಬಿ. ರವೀಶ್‌ಕುಮಾರ್.** ಕನ್ನಡ ಅಧ್ಯಾಪಕರು, ಸರ್ಕಾರಿ ಪ್ರೌಢಶಾಲೆ, ಕೇರ್ಗಳ್ಳಿ, ಮೈಸೂರು ತಾಲ್ಲೂಕು.

**ಶ್ರೀ. ಚಿಕ್ಕದೇವೇಗೌಡ,** ಕನ್ನಡ ಅಧ್ಯಾಪಕರು, ಸರ್ಕಾರಿ ಪ್ರೌಢಶಾಲೆ, ಉತ್ತರಹಳ್ಳಿ, ಬೆಂಗಳೂರು-೬೧

**ಶ್ರೀ. ತಮ್ಮಣ್ಣಗೌಡ ಹೆಚ್.ಸಿ.** ಕನ್ನಡ ಅಧ್ಯಾಪಕರು, ಸರ್ಕಾರಿ ಪ್ರೌಢಶಾಲೆ, ಹನುಮಂತಪುರ, ಹಾಸನ ತಾ.

**ಶ್ರೀಮತಿ. ಸುಶೀಲ,** ಕನ್ನಡ ಅಧ್ಯಾಪಕಿ, (ಪ್ರೌಢಶಾಲಾ ವಿಭಾಗ), ಸರ್ಕಾರಿ ಪದವಿಪೂರ್ವ ಕಾಲೇಜು, ಮದ್ದೂರು ತಾ.

**ಶ್ರೀ. ಬಸವರಾಜಪ್ಪ, ಎಂ,** ಕನ್ನಡ ಅಧ್ಯಾಪಕರು (ಪ್ರೌಢಶಾಲಾ ವಿಭಾಗ), ಸರ್ಕಾರಿಪದವಿಪೂರ್ವಕಾಲೇಜು, ಹೊಸನಗರ ತಾ.

**ಶ್ರೀ. ಎನ್.ಬಿ.ವೀರನಗೌಡ,** ಬಿ.ಅರ್.ಪಿ., ಕ್ಷೇತ್ರಸಮನ್ವಯಾಧಿಕಾರಿಗಳ ಕಛೇರಿ, ಶಿಕಾರಿಪುರ ತಾ, ಶಿವಮೊಗ್ಗ ಜಿಲ್ಲೆ.

**ಕಲಾವಿದರು:**

**ಶ್ರೀ. ವೆಂಕಟೇಶ್.** ಚಿತ್ರಕಲಾ ಶಿಕ್ಷಕರು, ಸರ್ಕಾರಿ ಪ್ರೌಢಶಾಲೆ, ಉರಮಾರ ಕಸಲಗೆರೆ, ಮಂಡ್ಯ ದಕ್ಷಿಣ ತಾ, ಮಂಡ್ಯ ಜಿಲ್ಲೆ.

### ಉನ್ನತ ಪರಿಶೀಲನ ಸಮಿತಿ

**ಡಾ. ಎಚ್.ಎಸ್. ರಾಘವೇಂದ್ರರಾವ್,** ನಿವೃತ್ತ ಪ್ರಾಧ್ಯಾಪಕರು, ನಂ.೭, ೧೫ನೇ ಕ್ರಾಸ್, ಜೆ.ಪಿ.ನಗರ, ಬೆಂಗಳೂರು-೭೮

**ಡಾ. ಜಿ.ಆರ್.ತಿಪ್ಪೇಸ್ವಾಮಿ,** ನಿವೃತ್ತ ಪ್ರಾಧ್ಯಾಪಕರು, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮಾನಸ ಗಂಗೋತ್ರಿ, ಮೈಸೂರು-೬

**ಡಾ. ಸೈಯದ್ ಜಮೀರ್‌ಉಲ್ಲಾಷರೀಫ್,** ನಿವೃತ್ತ ಪ್ರಾಂಶುಪಾಲರು, ಭಟ್ಕಳ, ಉತ್ತರ ಕನ್ನಡ ಜಿಲ್ಲೆ.

**ಡಾ. ಯಲ್ಲಪ್ಪ ಹಿಮ್ಮಡಿ,** ಎಸ್.ಪಿ.ಎಂ. ಕಲಾ ಮತ್ತು ವಾಣಿಜ್ಯ ಕಾಲೇಜು, ರಾಯಬಾಗ, ಬೆಳಗಾವಿ ಜಿಲ್ಲೆ.

**ಡಾ. ಕಲಾವತಿ,** ಕನ್ನಡ ಅಧ್ಯಾಪಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಬಳ್ಳಾರಿ.

**ಡಾ. ಪ್ರಶಾಂತ್ ನಾಯಕ್,** ಪ್ರಾಧ್ಯಾಪಕರು, ಕನ್ನಡ ಭಾರತಿ, ಕುವೆಂಪು ವಿಶ್ವವಿದ್ಯಾನಿಲಯ ಶಂಕರಘಟ್ಟ, ಶಿವಮೊಗ್ಗ.

**ಡಾ. ಗೀತಾವಸಂತ,** ಸಹಪ್ರಾಧ್ಯಾಪಕರು, ಕನ್ನಡ ವಿಭಾಗ ತುಮಕೂರು ವಿಶ್ವವಿದ್ಯಾಲಯ ತುಮಕೂರು.

**ಡಾ. ಸತ್ಯನಾರಾಯಣ, ಎಚ್.ಎಸ್.** ಉಪನ್ಯಾಸಕರು, ಸರ್ಕಾರಿ ಪದವಿ ಪೂರ್ವಕಾಲೇಜು, ಬಸವನಗುಡಿ, ಬೆಂಗಳೂರು.

**ಸಲಹೆ ಮತ್ತು ಮಾರ್ಗದರ್ಶನ :**

**ಶ್ರೀ ವೀರಣ್ಣ ಎಸ್. ಜತ್ತಿ,** ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ(ರಿ), ಬೆಂಗಳೂರು.

**ಶ್ರೀ ಕೋದಂಡರಾಮಯ್ಯ. ಎನ್,** ಉಪನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ(ರಿ), ಬೆಂಗಳೂರು.

**ಕಾರ್ಯಕ್ರಮ ಸಂಯೋಜಕರು :**

**ಶ್ರೀಮತಿ. ಎಂ.ಡಿ. ಉಷಾ,** ಹಿರಿಯ ಸಹಾಯಕ ನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ(ರಿ), ಬೆಂಗಳೂರು.





# ಪರಿಷ್ಕರಣೆ ಕುರಿತು

ಒಂದರಿಂದ ಹತ್ತನೇ ತರಗತಿಯ ಪಠ್ಯಪುಸ್ತಕಗಳ ಬಗ್ಗೆ ಪ್ರಕಟಗೊಂಡ ಸಾರ್ವಜನಿಕ ಅಭಿಪ್ರಾಯಗಳನ್ನು ಗಮನಿಸಿ ಮಾನ್ಯ ಮುಖ್ಯಮಂತ್ರಿಯವರೂ ಅರ್ಥಸಚಿವರೂ ಆಗಿರುವ ಶ್ರೀ ಸಿದ್ದರಾಮಯ್ಯನವರು ತಮ್ಮ ೨೦೧೪-೧೫ ರ ಬಜೆಟ್‌ನಲ್ಲಿ ತಜ್ಞರ ಸಮಿತಿಯನ್ನು ರಚಿಸುವ ಘೋಷಣೆ ಮಾಡಿದರು. ತಜ್ಞರು ಅನುಸರಿಸಬೇಕಾದ ಮೂಲ ಆಶಯವನ್ನು ಹೀಗೆ ಹೇಳಿದರು: "ಪಠ್ಯಪುಸ್ತಕಗಳನ್ನು ಸಾಮಾಜಿಕ ಸಾಮರಸ್ಯ, ನೈತಿಕಮೌಲ್ಯಗಳು, ವ್ಯಕ್ತಿತ್ವವಿಕಸನ, ವೈಜ್ಞಾನಿಕ ಮತ್ತು ವೈಚಾರಿಕ ಮನೋಭಾವ, ಜಾತ್ಯತೀತತೆ ಮತ್ತು ರಾಷ್ಟ್ರೀಯ ಬದ್ಧತೆಗಳಿಗೆ ಅನುವಾಗುವಂತೆ ತಜ್ಞರ ಸಮಿತಿಯನ್ನು ಪುನರ್ ರಚಿಸಲಾಗುವುದು" ಇದು ಬಜೆಟ್ ಭಾಷಣದಲ್ಲಿ ಸಾದರಪಡಿಸಿದ ಆಶಯ.

ಆನಂತರ ಶಿಕ್ಷಣ ಇಲಾಖೆಯು ಒಂದರಿಂದ ಹತ್ತನೇ ತರಗತಿಯವರೆಗಿನ ಪಠ್ಯಪುಸ್ತಕಗಳ ಪರಿಷ್ಕರಣೆಗಾಗಿ ೨೭ ಸಮಿತಿಗಳನ್ನು ರಚಿಸಿ ದಿನಾಂಕ: ೨೪.೧೧.೨೦೧೪ ರಂದು ಆದೇಶ ಹೊರಡಿಸಿತು. ಈ ಸಮಿತಿಗಳು ವಿಷಯವಾರು ಮತ್ತು ತರಗತಿವಾರು ಮಾನದಂಡಕ್ಕನುಗುಣವಾಗಿ ರಚಿತವಾದವು. ವಿವಿಧ ಪಠ್ಯವಿಷಯಗಳಿಗೆ ಸಂಬಂಧಿಸಿದ ತಜ್ಞರು, ಅಧ್ಯಾಪಕರು ಈ ಸಮಿತಿಗಳಲ್ಲಿದ್ದಾರೆ. ಈಗಾಗಲೇ ಲಿಖಿತವಾಗಿ ಬಂದಿರುವ ಅನೇಕ ಆಕ್ಷೇಪಗಳು ಮತ್ತು ವಿಶ್ಲೇಷಣೆಗಳನ್ನು ಪರಿಶೀಲಿಸಿ, ತಪ್ಪು ಒಪ್ಪುಗಳ ಬಗ್ಗೆ ನಿರ್ಣಯಿಸಿ ಪಠ್ಯಪುಸ್ತಕಗಳನ್ನು ಪರಿಷ್ಕರಿಸುವ ಹೊಣೆಹೊತ್ತ ಈ ಸಮಿತಿಗಳಿಗೆ 'ಅಗತ್ಯವಿದ್ದಲ್ಲಿ ಪಠ್ಯವಸ್ತುವನ್ನು ಪರಿಷ್ಕರಿಸಿ ನಂತರ ಪಠ್ಯಪುಸ್ತಕಗಳನ್ನು ಪರಿಷ್ಕರಿಸುವ' ಸ್ವಾತಂತ್ರ್ಯವನ್ನು ೨೪.೧೧.೨೦೧೪ರ ಆದೇಶದಲ್ಲೇ ನೀಡಲಾಗಿತ್ತು. ಆನಂತರ ೧೯.೦೯.೨೦೧೫ ರಂದು ಹೊಸ ಆದೇಶ ಹೊರಡಿಸಿ 'ಅಗತ್ಯವಿದ್ದಲ್ಲಿ ಪುನರ್ ರಚಿಸುವ' ಸ್ವಾತಂತ್ರ್ಯವನ್ನು ನೀಡಲಾಯಿತು. ಹೀಗೆ ಸಮಗ್ರ ಪರಿಷ್ಕರಣೆಗೊಂಡ ಪಠ್ಯಪುಸ್ತಕಗಳನ್ನು ೨೦೧೬-೧೭ ರ ಬದಲು ೨೦೧೭-೧೮ನೇ ಶೈಕ್ಷಣಿಕ ವರ್ಷದಲ್ಲಿ ಜಾರಿಗೊಳಿಸಲಾಗುವುದೆಂದು ಇದೇ ಆದೇಶದಲ್ಲಿ ತಿಳಿಸಲಾಯಿತು.

ಅನೇಕ ವ್ಯಕ್ತಿಗಳೂ ಸಂಘಟನೆಗಳೂ ಸ್ವಯಂಪ್ರೇರಿತರಾಗಿ ಪಠ್ಯಪುಸ್ತಕಗಳಲ್ಲಿರುವ ಮಾಹಿತಿದೋಷ, ಆಶಯದೋಷಗಳನ್ನು ಪಟ್ಟಿಮಾಡಿ ಶಿಕ್ಷಣ ಸಚಿವರಿಗೆ, ಪಠ್ಯಪುಸ್ತಕ ಸಂಘಕ್ಕೆ ಕಳುಹಿಸಿದ್ದರು. ಅವುಗಳ ಪರಿಶೀಲನೆ ಮಾಡಿದ್ದಲ್ಲದೆ, ಸಮಿತಿಗಳಾಚೆಗೆ ಅನೇಕ ಸಂವಾದಗಳನ್ನು ಏರ್ಪಡಿಸಿ ವಿಚಾರ ವಿನಿಮಯ ಮಾಡಿಕೊಂಡಿದ್ದೇವೆ. ಪ್ರಾಥಮಿಕ ಮತ್ತು ಪ್ರೌಢಶಾಲಾ ಅಧ್ಯಾಪಕರ ಸಂಘಗಳ ಜೊತೆ ಚರ್ಚಿಸಿದ್ದಲ್ಲದೆ ಪ್ರಶ್ನಾವಳಿ ಸಿದ್ಧಪಡಿಸಿ ಅಧ್ಯಾಪಕರಿಗೆ ಕಳಿಸಿ ಅಭಿಪ್ರಾಯಗಳನ್ನು ಸಂಗ್ರಹಿಸಲಾಗಿದೆ. ಅಧ್ಯಾಪಕರು, ವಿಷಯಪರಿವೀಕ್ಷಕರು ಮತ್ತು ಡಯಟ್ ಪ್ರಾಂಶುಪಾಲರ ಪ್ರತ್ಯೇಕ ಸಭೆಗಳನ್ನು ನಡೆಸಿ ವಿಶ್ಲೇಷಣಾತ್ಮಕ ಅಭಿಮತಗಳನ್ನು ಪಡೆಯಲಾಗಿದೆ. ವಿಜ್ಞಾನ, ಸಮಾಜವಿಜ್ಞಾನ, ಗಣಿತ, ಭಾಷೆ ಸಾಹಿತ್ಯಗಳಿಗೆ ಸಂಬಂಧಿಸಿದ ತಜ್ಞರಿಗೆ ಮೊದಲೇ ಪಠ್ಯಪುಸ್ತಕಗಳನ್ನು ಕಳುಹಿಸಿ ಆನಂತರ ಸಭೆ ನಡೆಸಿ ಚರ್ಚಿಸಲಾಗಿದೆ. ಮಹಿಳಾ ಸಂಘಟನೆ ಹಾಗೂ ವಿಜ್ಞಾನ ಸಂಬಂಧಿ ಸಂಸ್ಥೆಗಳನ್ನು ಆಹ್ವಾನಿಸಿ ಚಿಂತನೆ ನಡೆಸಲಾಗಿದೆ. ಹೀಗೆ ಎಲ್ಲಾ ಮೂಲಗಳಿಂದ ಪಡೆದ ಅರಿವಿನ ಆಧಾರದ ಮೇಲೆ ಪಠ್ಯಪುಸ್ತಕಗಳನ್ನು ಅಗತ್ಯವಿದ್ದಕಡೆ ಪರಿಷ್ಕರಿಸಲಾಗಿದೆ.

ಬಹುಮುಖ್ಯವಾದ ಇನ್ನೊಂದು ಸಂಗತಿಯನ್ನು ಇಲ್ಲಿ ಹೇಳಬೇಕು. ಕೇಂದ್ರೀಯ ಶಾಲಾ (ಎನ್.ಸಿ.ಇ.ಆರ್.ಟಿ) ಪಠ್ಯಪುಸ್ತಕಗಳ ಜೊತೆ ರಾಜ್ಯದ ಪಠ್ಯಪುಸ್ತಕಗಳನ್ನು ತೌಲನಿಕವಾಗಿ ಅಧ್ಯಯನ ಮಾಡಿ

ಸಲಹೆಗಳನ್ನು ನೀಡಲು ವಿಜ್ಞಾನ, ಗಣಿತ ಮತ್ತು ಸಮಾಜವಿಜ್ಞಾನಕ್ಕೆ ಸಂಬಂಧಿಸಿದಂತೆ ತಜ್ಞರ ಮೂರು ಸಮಿತಿಗಳನ್ನು ರಚಿಸಲಾಯಿತು. ಈ ಸಮಿತಿಗಳು ನೀಡಿದ ತೌಲನಿಕ ವಿಶ್ಲೇಷಣೆ ಮತ್ತು ಸಲಹೆಗಳನ್ನು ಆಧರಿಸಿ ರಾಜ್ಯ ಪಠ್ಯಪುಸ್ತಕಗಳ ಗುಣಮಟ್ಟವನ್ನು ಹೆಚ್ಚಿಸಲಾಗಿದೆ. ಕೇಂದ್ರೀಯ ಶಾಲಾ ಪಠ್ಯಪುಸ್ತಕಗಳಿಗಿಂತ ನಮ್ಮ ರಾಜ್ಯದ ಪಠ್ಯಪುಸ್ತಕಗಳ ಗುಣಮಟ್ಟ ಕಡಿಮೆಯಾಗದಂತೆ ಕಾಯ್ದುಕೊಳ್ಳಲಾಗಿದೆ. ಜೊತೆಗೆ ಆಂಧ್ರ, ತಮಿಳುನಾಡು, ಮಹಾರಾಷ್ಟ್ರಗಳ ಪಠ್ಯಪುಸ್ತಕಗಳ ಜೊತೆ ನಮ್ಮ ಪಠ್ಯಪುಸ್ತಕಗಳನ್ನು ಪರಿಶೀಲಿಸಲಾಗಿದೆ.

ಇನ್ನೊಂದು ಸ್ಪಷ್ಟನೆಯನ್ನು ನೀಡಲು ಬಯಸುತ್ತೇನೆ. ನಮ್ಮ ಸಮಿತಿಗಳು ಮಾಡಿರುವುದು ಪರಿಷ್ಕರಣೆಯೇ ಹೊರತು ಪಠ್ಯಪುಸ್ತಕಗಳ ಸಮಗ್ರ ರಚನೆಯಲ್ಲ. ಆದ್ದರಿಂದ ಈಗಾಗಲೇ ರಚಿತವಾಗಿರುವ ಪಠ್ಯಪುಸ್ತಕಗಳ ಸ್ವರೂಪಕ್ಕೆ ಎಲ್ಲಿಯೂ ಧಕ್ಕೆಯುಂಟುಮಾಡಿಲ್ಲ. ಲಿಂಗತ್ವ ಸಮಾನತೆ, ಪ್ರಾದೇಶಿಕ ಪ್ರಾತಿನಿಧ್ಯ, ರಾಷ್ಟ್ರೀಯ ಸಮಗ್ರತೆ, ಸಮಾನತೆ, ಸಾಮಾಜಿಕ ಸಾಮರಸ್ಯಗಳ ಹಿನ್ನೆಲೆಯಲ್ಲಿ ಕೆಲವು ಪರಿಷ್ಕರಣೆಗಳು ನಡೆದಿವೆ. ಹೀಗೆ ಪರಿಷ್ಕರಿಸುವಾಗ ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು ಮತ್ತು ರಾಜ್ಯ ಪಠ್ಯಕ್ರಮ ಚೌಕಟ್ಟುಗಳನ್ನು ಮೀರಿಲ್ಲವೆಂದು ತಿಳಿಸಬಯಸುತ್ತೇವೆ: ಜೊತೆಗೆ ನಮ್ಮ ಸಂವಿಧಾನದ ಆಶಯಗಳನ್ನು ಅನುಸರಿಸಲಾಗಿದೆ. ಸಮಿತಿಗಳು ಮಾಡಿದ ಪರಿಷ್ಕರಣೆಯನ್ನು ಮತ್ತೊಮ್ಮೆ ಪರಿಶೀಲಿಸಲು ವಿಷಯವಾರು ಉನ್ನತ ಪರಿಶೀಲನ ಸಮಿತಿಗಳನ್ನು ರಚಿಸಿ ಅಭಿಪ್ರಾಯಪಡೆದು ಅಳವಡಿಸಲಾಗಿದೆ.

ಹೀಗೆ ಕ್ರಮಬದ್ಧವಾಗಿ ನಡೆದ ಕೆಲಸಕ್ಕೆ ತಮ್ಮನ್ನು ತಾವು ಸಂಪೂರ್ಣ ತೊಡಗಿಸಿಕೊಂಡ ೨೭ ಸಮಿತಿಗಳ ಅಧ್ಯಕ್ಷರು ಮತ್ತು ಸದಸ್ಯರನ್ನು ಹಾಗೂ ಉನ್ನತ ಪರಿಶೀಲನಾ ಸಮಿತಿಯ ಸಮಸ್ತರನ್ನು ಕೃತಜ್ಞತೆಯಿಂದ ನೆನೆಯುತ್ತೇವೆ. ಅಂತೆಯೇ ಸಮಿತಿಗಳ ಕೆಲಸ ಸುಗಮವಾಗಿ ನಡೆಯುವಂತೆ ವ್ಯವಸ್ಥೆಮಾಡಲು ಕಾರ್ಯಕ್ರಮ ಅಧಿಕಾರಿಗಳಾಗಿ ನಿಷ್ಠೆಯಿಂದ ದುಡಿದ ಪಠ್ಯಪುಸ್ತಕ ಸಂಘದ ಎಲ್ಲಾ ಅಧಿಕಾರಿಗಳನ್ನೂ ನೆನೆಯುತ್ತೇವೆ. ಸಹಕರಿಸಿದ ಸಿಬ್ಬಂದಿಗೂ ನಮ್ಮ ವಂದನೆಗಳು. ಅಭಿಪ್ರಾಯ ನೀಡಿ ಸಹಕರಿಸಿದ ಸರ್ವ ಸಂಘಟನೆಗಳು ಮತ್ತು ತಜ್ಞರಿಗೆ ಧನ್ಯವಾದಗಳು.



**(ವೀರಣ್ಣ ಎಸ್. ಜತ್ತಿ)**
ವ್ಯವಸ್ಥಾಪಕ ನಿರ್ದೇಶಕರು
ಕರ್ನಾಟಕ ಪಠ್ಯಪುಸ್ತಕ ಸಂಘ (ರಿ.)
ಬೆಂಗಳೂರು.

**(ಪ್ರೊ. ಬರಗೂರು ರಾಮಚಂದ್ರಪ್ಪ)**
ಸರ್ವಾಧ್ಯಕ್ಷರು
ರಾಜ್ಯ ಪಠ್ಯಪುಸ್ತಕ ಪರಿಷ್ಕರಣ ಸಮಿತಿ
ಕರ್ನಾಟಕ ಪಠ್ಯಪುಸ್ತಕ ಸಂಘ (ರಿ.)
ಬೆಂಗಳೂರು.



# ಪುನರ್ ಪರಿಶೀಲನೆಯ ಕುರಿತು

೨೦೧೪ರ ಶೈಕ್ಷಣಿಕ ವರ್ಷದಲ್ಲಿ ಪ್ರಕಟವಾದ ಪಠ್ಯಪುಸ್ತಕಗಳು ರಾಜಕೀಯ ಕಾರಣಗಳಿಗಾಗಿ ಅದೇ ವರ್ಷ ಪರಿಷ್ಕರಣೆಗೆ ಒಳಗಾದವು. ಪರಿಷ್ಕೃತ ಪಠ್ಯಪುಸ್ತಕಗಳು ೨೦೧೭–೧೮ರ ಶೈಕ್ಷಣಿಕ ವರ್ಷದಲ್ಲಿ ವಿದ್ಯಾರ್ಥಿಗಳ ಕೈ ತಲಪಿದವು. ಪರಿಷ್ಕೃತ ಪಠ್ಯಗಳಲ್ಲಾದ ಬದಲಾವಣೆಗಳ ಬಗ್ಗೆ ವ್ಯಾಪಕ ಟೀಕೆ, ವಿಮರ್ಶೆಗಳು ಬಂದವು. ಶಿಕ್ಷಣದ ಮೂಲ ಆಶಯಗಳನ್ನು ಬದಿಗಿಟ್ಟು ಸ್ವಹಿತಾಸಕ್ತಿಯ ಸಿದ್ಧಾಂತಗಳ ಪ್ರಚಾರಕ್ಕೆ ಪಠ್ಯಪುಸ್ತಕಗಳನ್ನು ಬಳಸಿಕೊಳ್ಳಲಾಯಿತೆಂಬ ಆಕ್ಷೇಪ ಎಲ್ಲೆಡೆಯಿಂದ ಕೇಳಿಬಂದ ಹಿನ್ನೆಲೆಯಲ್ಲಿ ಕರ್ನಾಟಕ ಸರಕಾರವು ೨೦೨೧ರಲ್ಲಿ ಈ ಪಠ್ಯಗಳ ಮರುಪರಿಶೀಲನೆ ನಡೆಸುವಂತೆ ಆದೇಶಿಸಿ ಒಂದು ಸಮಿತಿಯನ್ನು ರಚಿಸಿತು. ಈ ಸಮಿತಿಯು ಆಪಾದನೆ ಕೇಳಿಬಂದ ನಿರ್ದಿಷ್ಟ ಪಠ್ಯಪುಸ್ತಕಗಳನ್ನು ಆಮೂಲಾಗ್ರ ಪರಿಶೀಲಿಸಿ ಬದಲಾವಣೆಗಳನ್ನು ಸೂಚಿಸಿದೆ.

ಇಂದಿನ ಮಕ್ಕಳೇ ಮುಂದಿನ ಜನಾಂಗವೆಂಬ ಮಾತಿದೆ. ಶಾಲೆಗಳಲ್ಲಿ ಓದುವ ಇಂದಿನ ಮಕ್ಕಳಿಗೆ ನಾವು ಎಂಥ ಪಠ್ಯಗಳನ್ನು ಬೋಧಿಸುತ್ತೇವೆಂಬುದರ ಮೇಲೆ ಸಮಾಜದ ಭವಿಷ್ಯ ನಿಂತಿದೆ. ವಿದ್ಯಾರ್ಥಿಗಳು ಓದುವ ಪಠ್ಯಗಳು ಆರೋಗ್ಯಕರ ಚಿಂತನೆಗಳನ್ನು ಒಳಗೊಂಡಿರಬೇಕು. ಸಮಾಜದ ವಿವಿಧ ವರ್ಗ–ಸಮುದಾಯಗಳಲ್ಲಿ ಪರಸ್ಪರ ಅಪನಂಬಿಕೆ, ದ್ವೇಷ, ತಾತ್ಸಾರಗಳನ್ನು ಹರಡುವಂತಿರಬಾರದು. ಅವರಲ್ಲಿ ರಾಷ್ಟ್ರೀಯತೆಯನ್ನೂ ದೇಶಪ್ರೇಮವನ್ನೂ ಉದ್ದೀಪಿಸುವಂತಿರಬೇಕು. ರಾಜ್ಯ, ದೇಶಗಳಲ್ಲಿ ಆಗಿಹೋದ ಸಂಗತಿಗಳ ಬಗ್ಗೆ ನಿಖರವಾದ, ವಸ್ತುನಿಷ್ಠವಾದ ಮಾಹಿತಿ ದೊರೆಯುವಂತಿರಬೇಕು. ಅವರಿಗೆ ಸ್ಥಳೀಯ ಸಂಸ್ಕೃತಿ, ಭಾಷೆ, ಜನಪದಗಳ ಪರಿಚಯವಾಗುವಂತಿರಬೇಕು. ಒಟ್ಟಾರೆಯಾಗಿ ಪಠ್ಯಗಳು ವಿದ್ಯಾರ್ಥಿಗಳನ್ನು ಉತ್ತಮ, ಜವಾಬ್ದಾರಿಯುತ, ಪ್ರಜ್ಞಾವಂತ, ಮುಕ್ತ ಮನಸ್ಸಿನ, ಸಭ್ಯ ನಾಗರಿಕರನ್ನಾಗಿ ಮಾಡಬೇಕು. ಆ ಜವಾಬ್ದಾರಿಯನ್ನು ಗಮನದಲ್ಲಿರಿಸಿಕೊಂಡು ಪಾಠಗಳನ್ನು ಪರಿಷ್ಕರಣೆ ಮಾಡಬೇಕಾಯಿತು.

೨೦೧೪ರಲ್ಲಿ ಪರಿಷ್ಕರಣೆಗೆ ಒಳಗಾಗಿದ್ದ ಭಾಷಾ ಪಠ್ಯಗಳಲ್ಲಿ ನಮಗೆ ಅನೇಕ ಸಮಸ್ಯೆಗಳು ಕಂಡುಬಂದವು. ಅವುಗಳನ್ನು ಸರಿಪಡಿಸಲು ಪಠ್ಯಪುಸ್ತಕಗಳ ಪರಿಶೀಲನೆ, ಪರಿಷ್ಕರಣೆಗಳಲ್ಲಿ ನಾವು ನಮ್ಮದೇ ಆದ ಚೌಕಟ್ಟನ್ನು ನಿರ್ಮಿಸಿಕೊಂಡೆವು. ಭಾಷಾಪಠ್ಯವು ಇರುವುದು ವಿದ್ಯಾರ್ಥಿಯಲ್ಲಿ ಅಭಿವ್ಯಕ್ತಿಯ ಸಾಮರ್ಥ್ಯವನ್ನು ಉತ್ತಮಪಡಿಸುವುದಕ್ಕೆ. ಭಾಷಾಪಠ್ಯಗಳನ್ನು ಅಧ್ಯಯನ ಮಾಡಿದ ವಿದ್ಯಾರ್ಥಿಯಲ್ಲಿ ಭಾಷೆಯ ಬಗ್ಗೆ ಅಭಿಮಾನ ಮೂಡಬೇಕು; ಆತನ ಭಾಷಾಪ್ರೌಢಿಮೆ ಗಣನಾತ್ಮಕವಾಗಿ ಹೆಚ್ಚಬೇಕು. ಓದುವ, ಆಲಿಸುವ, ಮಾತಾಡುವ ಮತ್ತು ಬರೆಯುವ ಸಾಮರ್ಥ್ಯಗಳು ಸುಧಾರಿಸಬೇಕು. ಸ್ವತಂತ್ರವಾಗಿ ವಿದ್ಯಾರ್ಥಿಯು ತನ್ನ ಅಭಿಪ್ರಾಯ, ಅನಿಸಿಕೆಗಳನ್ನು ಅತ್ಯಂತ ಶಕ್ತಿಶಾಲಿಯಾಗಿ ಹೇಳುವುದಕ್ಕೆ ಸಾಧ್ಯವಾಗಬೇಕು. ೨೦೧೪ರಲ್ಲಿ ಪರಿಷ್ಕರಣೆಗೆ ಒಳಗಾದ ಪಠ್ಯಪುಸ್ತಕಗಳಲ್ಲಿ ಭಾಷೆಯ ಈ ಬಗೆಯ ಕಲಿಕೆಗೆ ಹಿನ್ನಡೆಯಾಗಿ ಕೇವಲ ಸಿದ್ಧಾಂತಪ್ರಚಾರವೇ ಮುನ್ನೆಲೆಗೆ ಬಂದಿದ್ದುದನ್ನು ಗಮನಿಸಿದೆವು. ಆ ಪಠ್ಯಗಳ ಮರುಪರಿಷ್ಕರಣೆಯ ಹೊತ್ತಿನಲ್ಲಿ ಈ ನಿಯಮಗಳನ್ನು ಹೇರಿಕೊಂಡೆವು: (೧) ಭಾಷಾಪಠ್ಯವಿರುವುದು ಅತ್ಯುತ್ತಮವಾದ ಪ್ರಾತಿನಿಧಿಕ ಪಠ್ಯವನ್ನು ಕೊಡುವುದಕ್ಕಾಗಿಯೇ ಹೊರತು ಸಾಮಾಜಿಕನ್ಯಾಯ, ಲಿಂಗಸಮಾನತೆ ಇತ್ಯಾದಿ ಅಂಶಗಳನ್ನು ತುರುಕುವುದಕ್ಕಲ್ಲ. ಹಾಗಾಗಿ ಭಾಷೆಯ ವೈವಿಧ್ಯ ಹಾಗೂ ವಿಶೇಷಗಳನ್ನು ಹೆಚ್ಚು ಕಾಣಿಸುವ ಗದ್ಯ/ಪದ್ಯ ಭಾಗಗಳನ್ನು ಆರಿಸಿಕೊಳ್ಳಬೇಕು. (೨) ಭಾಷೆಯ ಪಠ್ಯದ ಹೆಸರಿನಲ್ಲಿ ಸಿದ್ಧಾಂತಪ್ರಚಾರಕ್ಕೆ ಅವಕಾಶವಾಗಬಾರದು. (೩) ಗ್ರಾಂಥಿಕ ಭಾಷೆಯಲ್ಲದೆ ಮೌಖಿಕ ಪರಂಪರೆಯ ಹಾಗೂ ಹಲವು ಪ್ರಕಾರದ ಸಾಹಿತ್ಯಗಳಿಗೆ ಅವಕಾಶ ಕೊಡಬೇಕು. (೪) ಬಳಸಿದ ಭಾಷೆ, ಭಾಷಾಸೊಗಡು, ಪ್ರತಿಪಾದಿಸಿರುವ ವಿಚಾರ, ಹೊಸ ಚಿಂತನೆಗಳನ್ನು ಹುಟ್ಟಿಸುವ ಸಾಧ್ಯತೆ, ಸಾಹಿತ್ಯ ಪ್ರಕಾರದ ವೈಶಿಷ್ಟ್ಯ ಇತ್ಯಾದಿ ಎಲ್ಲ ಬಗೆಯಲ್ಲೂ ಪಾಠಗಳ ಗುಣಮಟ್ಟ ಅತ್ಯುತ್ತಮವಾಗಿರಬೇಕು.





(೫) ಕವಿ/ಲೇಖಕರ ಪುನರಾವರ್ತನೆಯನ್ನು ಕಡಿಮೆ ಮಾಡಿ ಹೊಸ ಕವಿ/ಲೇಖಕರ ಬರಹಗಳಿಗೆ ಅವಕಾಶ ಮಾಡಿಕೊಡಬೇಕು. (೬) ಭಾಷೆಯ ಸೊಬಗನ್ನು ಪರಿಚಯಿಸುವ ಭಾಗಗಳನ್ನು ಪ್ರತಿ ಅಧ್ಯಾಯದ ಜೊತೆ ಸೇರಿಸಬೇಕು.

ಅತ್ಯುತ್ತಮ ಪಠ್ಯಪುಸ್ತಕ ಎಂಬುದು ಒಂದು ಆದರ್ಶಸ್ಥಿತಿ. ಅದರತ್ತ ನಡೆಯುವುದು ನಮ್ಮ ಆಶಯವೇ ಹೊರತು ನೂರಕ್ಕೆ ನೂರು ಅತ್ಯುತ್ತಮವಾದ ಪಠ್ಯಪುಸ್ತಕವನ್ನು ರಚಿಸುವುದು ಸಾಧ್ಯವಿಲ್ಲ. ಆ ವಿನಯದಿಂದಲೇ ನಾವು ಈ ಪುನರ್ ಪರಿಶೀಲನೆಯ ಕಾರ್ಯವನ್ನು ಮುಗಿಸಿ ಪಠ್ಯಗಳನ್ನು ನಿಮ್ಮ ಕೈಗಿಡುತ್ತಿದ್ದೇವೆ. ಇದು ಕೇವಲ ಮರುಪರಿಷ್ಕರಣೆಯೇ ಹೊರತು ಸಮಗ್ರ ಪುನಾರಚನೆಯಲ್ಲ. ಈಗಾಗಲೇ (೨೦೧೪ರಲ್ಲಿ) ರಚಿತವಾಗಿದ್ದ ಪಠ್ಯಪುಸ್ತಕದ ಆಶಯ ಮತ್ತು ಸ್ವರೂಪಕ್ಕೆ ಎಲ್ಲಿಯೂ ಧಕ್ಕೆಯುಂಟುಮಾಡಿಲ್ಲ. ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು ಮತ್ತು ಅದನ್ನನುಸರಿಸಿ ಬಂದ ರಾಜ್ಯ ಪಠ್ಯಕ್ರಮ ಚೌಕಟ್ಟುಗಳನ್ನು ಮುಂದಿಟ್ಟುಕೊಂಡೇ ಇಡಿಯ ಮರುಪರಿಷ್ಕರಣೆಯ ಕಾರ್ಯ ನಡೆದಿದೆ. ಜೊತೆಗೆ ಸಂವಿಧಾನದ ಆಶಯಗಳನ್ನು ಎತ್ತಿಹಿಡಿಯಲಾಗಿದೆ. ಪರಿಷ್ಕರಣೆಯ ಕೆಲಸವನ್ನು ಅತ್ಯಂತ ಅಚ್ಚುಕಟ್ಟಾಗಿ ನಿರ್ವಹಿಸಿರುವ ಪರಿಶೀಲನಾ ಸಮಿತಿಯ ನನ್ನ ಎಲ್ಲ ಸಹೋದ್ಯೋಗಿಗಳಿಗೆ ನಾನು ಕೃತಜ್ಞ. ಅಂತೆಯೇ ಸಮಿತಿಯ ಕೆಲಸ ಸುಗಮವಾಗಿ ನಡೆಯಲು ಸಹಕರಿಸಿದ ಪಠ್ಯಪುಸ್ತಕ ಸಂಘದ ಎಲ್ಲ ಅಧಿಕಾರಿಗಳು ಮತ್ತು ಸಿಬ್ಬಂದಿಗೂ ಆಭಾರಿ. ಈ ಪರಿಷ್ಕರಣೆಯು ಈಗಷ್ಟೇ ಬಂದಿರುವ ಹೊಸ ರಾಷ್ಟ್ರೀಯ ಶಿಕ್ಷಣ ನೀತಿಯ ಆಶಯಗಳನ್ನು ಹೆಚ್ಚು ಪ್ರತಿಫಲಿಸುತ್ತ, ಮುಂದೆ ಬರಲಿರುವ ಸಮಗ್ರ ಪುನಾರಚಿತ ಪಠ್ಯಗಳಿಗೆ ಪ್ರವೇಶಿಕೆಯಾಗಲಿದೆ ಎಂಬ ಭರವಸೆ ನಮ್ಮದು.

**ವೀರಣ್ಣ ಎಸ್. ಜತ್ತಿ**
ವ್ಯವಸ್ಥಾಪಕ ನಿರ್ದೇಶಕರು
ಕರ್ನಾಟಕ ಪಠ್ಯಪುಸ್ತಕ ಸಂಘ (ರಿ.)
ಬೆಂಗಳೂರು.

**ರೋಹಿತ್ ಚಕ್ರತೀರ್ಥ**
ಅಧ್ಯಕ್ಷರು
ಕರ್ನಾಟಕ ಪಠ್ಯಪುಸ್ತಕಗಳ ಪರಿಶೀಲನಾ ಸಮಿತಿ



### ಪುನರ್ ಪರಿಷ್ಕರಣಾ ಸಮಿತಿ

**ಶ್ರೀ ರೋಹಿತ್ ಚಕ್ರತೀರ್ಥ,** ಕನ್ನಡ ಅಭಿವೃದ್ಧಿ ಪ್ರಾಧಿಕಾರ, ವಿಧಾನಸೌಧ, ಬೆಂಗಳೂರು.

**ಸದಸ್ಯರು :**

**ಡಾ. ರೋಹಿಣಾಕ್ಷ,** ಸಹಾಯಕ ಪ್ರಾಧ್ಯಾಪಕರು, ಜಾನಪದಶಾಸ್ತ್ರ ಮತ್ತು ಬುಡಕಟ್ಟು ಅಧ್ಯಯನ ವಿಭಾಗ, ಕರ್ನಾಟಕ ಕೇಂದ್ರೀಯ ವಿಶ್ವವಿದ್ಯಾಲಯ, ಕಡಗಂಚಿ, ಆಳಂದ ರಸ್ತೆ, ಕಲಬುರಗಿ.

**ಶ್ರೀ ಚಿಕ್ಕದೇವೇಗೌಡ,** ಕನ್ನಡ ಭಾಷಾ ಶಿಕ್ಷಕರು, ಕರ್ನಾಟಕ ಪಬ್ಲಿಕ್ ಶಾಲೆ, ಉತ್ತರಹಳ್ಳಿ, ಬೆಂಗಳೂರು, ದಕ್ಷಿಣ ವಲಯ–೧.

**ಸಲಹೆಗಾರರು :**

**ಶ್ರೀ ವೀರಣ್ಣ ಎಸ್. ಜತ್ತಿ,** ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ (ರಿ.), ಬೆಂಗಳೂರು.

**ಶ್ರೀ ಕೋದಂಡರಾಮಯ್ಯ ಎನ್,** ಉಪನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ (ರಿ.), ಬೆಂಗಳೂರು.

**ಕಾರ್ಯಕ್ರಮ ಸಂಯೋಜಕರು :**

**ಶ್ರೀಮತಿ. ಎಂ.ಡಿ. ಉಷಾ,** ಹಿರಿಯ ಸಹಾಯಕ ನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ (ರಿ.), ಬೆಂಗಳೂರು.






# ಪರಿವಿಡಿ

# ತೋರಿಸಿ–ಹೇಳಿಸಿ

## (ಪಾಠ – ೧ : ಪಾಠಪೂರ್ವ ಚಟುವಟಿಕೆ)

ಅ) ಚಿತ್ರ ತೋರಿಸಿ ಪದ ಹೇಳಿಸಿ.



ತಾಯಿ



ರೈತ



ವೈದ್ಯೆ



ಸೈನಿಕ



ತಂದೆ








# ವಂದನೆ (ಪದ್ಯ)




ಕವಿ : ಎಲ್. ಕೆ. ಕಂಬಾರ

(ಈ ಪದ್ಯವನ್ನು ರಾಗವಾಗಿ ಓದಿ, ಮಕ್ಕಳಿಂದ ಹೇಳಿಸಿ)



ನವಮಾಸ ಹೊತ್ತು
ನನ್ನನು ಹೆತ್ತು
ಸಾಕಿದ ತಾಯಿಗೆ ವಂದನೆ



ಮೈಮುರಿ ದುಡಿದು
ನನ್ನನು ಸಲುಹಿ
ಬೆಳೆಸಿದ ತಂದೆಗೆ ವಂದನೆ






ವಿದ್ಯಾ ಬುದ್ಧಿ
ಬಾಲ್ಯದಿ ಕಲಿಸಿ
ಹರಸಿದ ಗುರುವಿಗೆ ವಂದನೆ



ಬಗೆ ಬಗೆ ರೋಗವ
ವಾಸಿ ಮಾಡುವ
ವೈದ್ಯೆಗೆ ಮಾಡುವೆ ವಂದನೆ





ನಿತ್ಯದಿ ದುಡಿದು
ಅನ್ನವ ನೀಡುವ
ರೈತಗೆ ಮಾಡುವೆ ವಂದನೆ



ನಾಡಿನ ರಕ್ಷಣೆ
ನಿತ್ಯದಿ ಮಾಡುವ
ಯೋಧಗೆ ಮಾಡುವೆ ವಂದನೆ



**ಕೇಳಿದ ಪದಗಳು :**

ಮಾಸ, ಹೊತ್ತು, ಹೆತ್ತು, ತಾಯಿ, ದುಡಿ, ತಂದೆ, ವಿದ್ಯೆ, ಬುದ್ಧಿ, ಬಾಲ್ಯ, ಗುರು, ರೋಗ, ವೈದ್ಯೆ, ನಿತ್ಯ, ದುಡಿ, ರೈತ, ನಾಡು, ನಿತ್ಯ, ಯೋಧ.

**ಪದಗಳ ಅರ್ಥ :**

ಮಾಸ – ತಿಂಗಳು
ವಂದನೆ – ನಮಸ್ಕಾರ
ಸಲಹು – ಆರೈಕೆ
ನಿತ್ಯ – ಪ್ರತಿದಿನ



## ಅಭ್ಯಾಸ

**ಅ) ಬಿಟ್ಟಿರುವ ಪದವನ್ನು ಮಕ್ಕಳಿಂದ ಹೇಳಿಸಿ.**

೧) ನವಮಾಸ ಹೊತ್ತು ಸಾಕಿದ __________

೨) ಮೈಮುರಿ ದುಡಿದು ಬೆಳೆಸಿದ __________

೩) ವಿದ್ಯಾ ಬುದ್ಧಿ ಕಲಿಸಿ ಹರಸಿದ __________

೪) ನಿತ್ಯದಿ ದುಡಿದು ಅನ್ನವ ನೀಡುವ __________

೫) ರೋಗ ವಾಸಿ ಮಾಡುವ__________

೬) ನಾಡಿನ ರಕ್ಷಣೆ ಮಾಡುವ__________

**ಆ) ಬಿಟ್ಟಿರುವ ಪದ್ಯದ ಸಾಲುಗಳನ್ನು ಮಕ್ಕಳಿಂದ ಹೇಳಿಸಿ.**

೧) ನವಮಾಸ ಹೊತ್ತು ನನ್ನನು

__________________________________________

೨) ಮೈಮುರಿ ದುಡಿದು ನನ್ನನು ಸಲುಹಿ

__________________________________________

೩) ವಿದ್ಯಾ ಬುದ್ಧಿ ಬಾಲ್ಯದಿ ಕಲಿಸಿ

__________________________________________

೪) ಬಗೆ ಬಗೆ ರೋಗವ ವಾಸಿ ಮಾಡುವ

__________________________________________

೫) ನಿತ್ಯದಿ ದುಡಿದು ಅನ್ನವ ನೀಡುವ

__________________________________________

೬) ನಾಡಿನ ರಕ್ಷಣೆ ನಿತ್ಯದಿ ಮಾಡುವ

__________________________________________





## ಇ) ಚಿತ್ರಗಳನ್ನು ತೋರಿಸಿ ಪ್ರಶ್ನೆಗಳನ್ನು ಕೇಳಿ ಉತ್ತರ ಪಡೆಯಿರಿ



೧. ವೈದ್ಯೆ ಏನು ಮಾಡುತ್ತಿದ್ದಾರೆ?



೨. ರೈತರು ಏನು ಮಾಡುತ್ತಿದ್ದಾರೆ?




೩. ಶಿಕ್ಷಕಿ ಏನು ಮಾಡುತ್ತಿದ್ದಾರೆ?

## (ಪಾಠ – ೨ : ಪಾಠಪೂರ್ವ ಚಟುವಟಿಕೆ)

**ಅ) ಚಿತ್ರ ತೋರಿಸಿ ಪದ ಹೇಳಿಸಿ.**



ಕೋಳಿ



ಪಾರಿವಾಳ



ಗುಬ್ಬಚ್ಚಿ



ತೋಟ



ರಾಗಿತೆನೆ



ಗುಟುಕು








# ಸಹಕಾರ (ಗದ್ಯ)




(ಪಾಠವನ್ನು ಓದಿ ಹೇಳಿ) – ಸಮಿತಿ ರಚನೆ





ಒಂದು ಊರು. ಆ ಊರಿನ ಹೆಸರು ಮಲ್ಲಿಗೆಹಳ್ಳಿ. ಆ ಹಳ್ಳಿಯಲ್ಲಿ ಒಂದು ತೋಟವಿತ್ತು. ಆ ತೋಟದಲ್ಲಿ ಒಂದು ಕೋಳಿ ತನ್ನ ಮರಿಗಳ ಜೊತೆಯಲ್ಲಿ ವಾಸವಾಗಿತ್ತು. ಅದೇ ತೋಟದಲ್ಲಿ ಗುಬ್ಬಚ್ಚಿ ಮತ್ತು ಪಾರಿವಾಳಗಳೂ ವಾಸವಾಗಿದ್ದವು.

ಒಂದು ದಿನ ಕೋಳಿಗೆ ರಾಗಿಯ ಕಾಳುಗಳು ಸಿಕ್ಕವು. ರಾಗಿಯನ್ನು ಹೊಲದಲ್ಲಿ ಬಿತ್ತಿದರೆ ತುಂಬಾ ರಾಗಿ ಸಿಗುತ್ತದೆ ಎಂದು ಕೋಳಿಗೆ ಅನಿಸಿತು.

ಕೋಳಿ ರಾಗಿಯನ್ನು ಬಿತ್ತಲು ಗುಬ್ಬಚ್ಚಿಯ ಸಹಾಯ ಕೇಳಿತು. ಗುಬ್ಬಚ್ಚಿ "ನನ್ನಿಂದ ಆಗದು" ಎಂದಿತು. ಕೋಳಿ ಪಾರಿವಾಳದ ಸಹಾಯವನ್ನು ಕೇಳಿತು. ಅದೂ "ನನ್ನಿಂದ ಆಗದು" ಎಂದಿತು. ಕೋಳಿ ತನ್ನ ಮರಿಗಳನ್ನು ಕೂಡಿಕೊಂಡು ರಾಗಿಯನ್ನು ಬಿತ್ತಿತು.

ಕೆಲವು ದಿನಗಳು ಕಳೆದವು. ರಾಗಿಯ ಪೈರುಗಳು ಬೆಳೆದು ದೊಡ್ಡದಾದವು. ರಾಗಿಯ ಪೈರಿನಲ್ಲಿ ತೆನೆಗಳು ಬಿಟ್ಟವು. ಆ ತೆನೆಗಳನ್ನು ಕೊಯ್ಯುವ ದಿನ ಬಂದಿತು.



ಕೋಳಿ ರಾಗಿಯ ತೆನೆಗಳನ್ನು ಕೊಯ್ಯಲು ಗುಬ್ಬಚ್ಚಿಯ ಸಹಾಯ ಕೇಳಿತು. ಗುಬ್ಬಚ್ಚಿ "ನನ್ನಿಂದ ಆಗದು" ಎಂದಿತು. ಕೋಳಿ ಪಾರಿವಾಳದ ಸಹಾಯವನ್ನು ಕೇಳಿತು. ಅದೂ "ನನ್ನಿಂದ ಆಗದು" ಎಂದಿತು. ಕೋಳಿ ತನ್ನ ಮರಿಗಳನ್ನು ಕೂಡಿಕೊಂಡು ರಾಗಿಯ ತೆನೆಗಳನ್ನು ಕೊಯ್ದಿತು. ಕಾಳನ್ನು ಸಂಗ್ರಹಿಸಿ ಇಟ್ಟಿತು.

ಒಂದು ದಿನ ಗುಬ್ಬಚ್ಚಿ ಮತ್ತು ಪಾರಿವಾಳಗಳಿಗೆ ತುಂಬಾ ಹಸಿವಾಯಿತು. ಅವು ಕೋಳಿಯ ಬಳಿಬಂದು "ಅಕ್ಕಾ, ತಿನ್ನಲು ರಾಗಿ ಕೊಡು" ಎಂದು ಕೇಳಿದವು. ಕೋಳಿ "ನೀವು ಬಿತ್ತಲೂ ಬರಲಿಲ್ಲ, ಕೊಯ್ಯಲೂ ಬರಲಿಲ್ಲ. ನಿಮಗೆ ಏಕೆ ರಾಗಿ ಕೊಡಲಿ?" ಎಂದು ಕೇಳಿತು. ಗುಬ್ಬಚ್ಚಿ ಮತ್ತು ಪಾರಿವಾಳಗಳಿಗೆ ತಮ್ಮ ತಪ್ಪು ತಿಳಿಯಿತು. ಅವು ನಾಚಿ ತಲೆತಗ್ಗಿಸಿ ನಿಂತವು. ಕೋಳಿಗೆ 'ಅಯ್ಯೋ ಪಾಪ!' ಅನಿಸಿತು. ರಾಗಿಯನ್ನು ಕೊಟ್ಟಿತು.

**ಕೇಳಿದ ಪದಗಳು :**

ಒಂದು, ಊರು, ಹೆಸರು, ಮಲ್ಲಿಗೆಹಳ್ಳಿ, ಕೋಳಿ, ಮರಿ, ಜೊತೆ, ವಾಸ, ಗುಬ್ಬಚ್ಚಿ, ಪಾರಿವಾಳ, ದಿನ, ರಾಗಿಕಾಳು, ನೆಲ, ಬಿತ್ತು, ತುಂಬಾ, ಸಹಾಯ, ಕೂಡಿ, ಕೆಲವು, ದೊಡ್ಡದು, ಕೇಳು, ಬೆಳೆ, ತೆನೆ, ಕೊಯ್ಯು, ಪೈರು, ಸಂಗ್ರಹಿಸು, ಬಳಿ, ಹಸಿವು, ನಾಚು, ತಲೆತಗ್ಗಿಸು, ತಪ್ಪು.



**ಪದಗಳ ಅರ್ಥ :**

ಗುಬ್ಬಚ್ಚಿ–ಗುಬ್ಬಿ, ಒಂದು ಜಾತಿಯ ಸಣ್ಣ ಪಕ್ಷಿ ; ಸಂಗ್ರಹಿಸು–ಒಟ್ಟುಗೂಡಿಸು;
ಬಿತ್ತು – ಬೀಜ ಹಾಕು; ಪೈರು – ಧಾನ್ಯದ ಬೆಳೆ.

## ಅಭ್ಯಾಸ

**ಅ) ಪ್ರಶ್ನೆ ಕೇಳಿ, ಮಕ್ಕಳಿಂದ ಉತ್ತರ ಹೇಳಿಸಿ.**

೧) ಹಳ್ಳಿಯ ಹೆಸರೇನು?

೨) ಕೋಳಿ ಎಲ್ಲಿ ವಾಸವಾಗಿತ್ತು?

೩) ಕೋಳಿ ಏನನ್ನು ಬಿತ್ತಲು ಗುಬ್ಬಚ್ಚಿಯ ಸಹಾಯ ಕೇಳಿತು?

೪) ರಾಗಿಯ ಪೈರಿನಲ್ಲಿ ಏನು ಬಿಟ್ಟಿತು?



೫) ಕೋಳಿ ಯಾರನ್ನು ಕೂಡಿಕೊಂಡು ರಾಗಿಯ ತೆನೆಗಳನ್ನು ಕೊಯ್ದಿತು?

೬) ಗುಬ್ಬಚ್ಚಿ ಮತ್ತು ಪಾರಿವಾಳಗಳಿಗೆ ಏನು ತಿಳಿಯಿತು?

೭) ಕೋಳಿಗೆ ಏನು ಅನಿಸಿತು?

## ಆ) ಕೊಟ್ಟಿರುವ ವಾಕ್ಯಗಳಲ್ಲಿ ಬಿಟ್ಟಿರುವ ಪದಗಳನ್ನು ಹೇಳಿಸಿ.

೧) ಕೋಳಿ ರಾಗಿಯನ್ನು ಬಿತ್ತಲು ಗುಬ್ಬಚ್ಚಿಯ ____________ ಕೇಳಿತು.

೨) ಕೋಳಿ ತನ್ನ ಮರಿಗಳನ್ನು ಕೂಡಿಕೊಂಡು ____________ ಬಿತ್ತಿತು.

೩) ಒಂದು ದಿನ ಗುಬ್ಬಚ್ಚಿ ಮತ್ತು ಪಾರಿವಾಳಗಳಿಗೆ ತುಂಬಾ ____________.

೪) ____________ ಮತ್ತು ಪಾರಿವಾಳಗಳಿಗೆ ತಮ್ಮ ____________ ತಿಳಿಯಿತು.

## ಇ) ಮಕ್ಕಳಿಂದ ಚಿತ್ರಗಳಿಗೆ ಸೂಕ್ತವಾದ ಬಣ್ಣ ತುಂಬಿಸಿ.








## (ಪಾಠ – ೩ : ಪಾಠಪೂರ್ವ ಚಟುವಟಿಕೆ)

ಅ) ಚಿತ್ರ ತೋರಿಸಿ, ಪದ ಹೇಳಿಸಿ.

೧  ೧ ಮೂಗು

೨  ೨ ಕಣ್ಣುಗಳು

೩  ೩ ಎಲೆಗಳು

೪  ೪ ಹೂಗಳು

೫  ೫ ಕೈ ಬೆರಳುಗಳು











# ಊಟದ ಆಟ (ಪದ್ಯ)

ಕವಿ : ಜಿ.ಪಿ. ರಾಜರತ್ನಂ

(ಈ ಪದ್ಯವನ್ನು ರಾಗವಾಗಿ ಹಾಡಿ ಮಕ್ಕಳಿಂದ ಹೇಳಿಸಿ)

೧ ಒಂದು ಎರಡು
ಬಾಳೆಲೆ ಹರಡು ೨

೩ ಮೂರು ನಾಲ್ಕು
ಅನ್ನ ಹಾಕು ೪

೫ ಐದು ಆರು
ಬೇಳೆ ಸಾರು ೬





೭ ಏಳು ಎಂಟು
ಪಲ್ಯಕೆ ದಂಟು ೮

೯ ಒಂಬತ್ತು ಹತ್ತು
ಎಲೆ ಮುದಿರೆತ್ತು ೧೦

ಒಂದರಿಂದ ಹತ್ತು
ಹೀಗಿತ್ತು

ಊಟದ ಆಟವು
ಮುಗಿದಿತ್ತು









**ಕೇಳಿದ ಪದಗಳು :**

ಒಂದು, ಎರಡು, ಬಾಳೆಲೆ, ಹರಡು, ಮೂರು, ನಾಲ್ಕು, ಅನ್ನ, ಹಾಕು, ಐದು, ಆರು, ಬೇಳೆ, ಸಾರು, ಏಳು, ಎಂಟು, ಪಲ್ಯ, ದಂಟು, ಒಂಬತ್ತು, ಹತ್ತು, ಎಲೆ, ಮುದಿರು, ಎತ್ತು, ಊಟ.

**ಪದಗಳ ಅರ್ಥ :**

ಪಲ್ಯ–ತರಕಾರಿಯಿಂದ ಮಾಡಿದ ಪದಾರ್ಥ, ತಾಳದ ; ದಂಟು–ಒಂದು ಜಾತಿಯ ತರಕಾರಿ ಸೊಪ್ಪು ; ಮುದಿರು – ಮುಚ್ಚು, ಮಡಿಚು.

## ಅಭ್ಯಾಸ

**ಅ) ನೀಡಿರುವ ಪದಗಳನ್ನು ಹೇಳಿ, ಮಕ್ಕಳಿಂದ ಹೇಳಿಸಿ.**

ಒಂದು, ಎರಡು, ಮೂರು, ನಾಲ್ಕು, ಐದು,
ಆರು, ಏಳು, ಎಂಟು, ಒಂಬತ್ತು, ಹತ್ತು.



**ಆ) ಈ ಪ್ರಾಸ ಪದಗಳನ್ನು ಹೇಳಿ, ಮಕ್ಕಳಿಂದ ಹೇಳಿಸಿ.**

೧) ಎರಡು–ಹರಡು

೨) ಆರು–ಸಾರು

೩) ಎಂಟು–ದಂಟು

೪) ಹತ್ತು–ಎತ್ತು

**ಇ) ಪದ್ಯದ ಸಾಲುಗಳನ್ನು ಕೆಳಗೆ ನೀಡಿದೆ. ಆ ಸಾಲುಗಳಲ್ಲಿ ಒಂದೊಂದು ಪದವನ್ನು ಬಿಡಲಾಗಿದೆ. ಬಿಟ್ಟಿರುವ ಪದವನ್ನು ಮಕ್ಕಳಿಂದ ಹೇಳಿಸಿ.**

೧) ಒಂದು ಎರಡು ______ ಹರಡು.

೨) ಮೂರು ನಾಲ್ಕು ______ ಹಾಕು.

೩) ಐದು ಆರು ______ ಸಾರು.

೪) ಏಳು ಎಂಟು ______ ದಂಟು.

೫) ಒಂಬತ್ತು ಹತ್ತು ______ ಮುದಿರೆತ್ತು.



ಈ) ಚಿತ್ರಗಳನ್ನು ತೋರಿಸಿ, ಪಕ್ಕದಲ್ಲಿರುವ ಪ್ರಶ್ನೆಗಳನ್ನು ಕೇಳಿ ಮಕ್ಕಳಿಂದ ಉತ್ತರ ಪಡೆಯಿರಿ.



ಈ ಹಣ್ಣಿನ ಹೆಸರೇನು?
ಇಲ್ಲಿ ಎಷ್ಟು ಹಣ್ಣಿದೆ?



ಈ ಚಿತ್ರದಲ್ಲಿರುವ ಹಣ್ಣಿನ ಹೆಸರೇನು?
ಇಲ್ಲಿ ಎಷ್ಟು ಹಣ್ಣುಗಳಿವೆ?



ಈ ಚಿತ್ರದಲ್ಲಿರುವ ಹಣ್ಣಿನ ಹೆಸರೇನು?
ಇಲ್ಲಿ ಎಷ್ಟು ಹಣ್ಣುಗಳಿವೆ?



ಈ ಚಿತ್ರದಲ್ಲಿರುವ ಕಾಯಿಗಳ ಹೆಸರೇನು?
ಇಲ್ಲಿ ಎಷ್ಟು ಕಾಯಿಗಳಿವೆ?



ಈ ಚಿತ್ರದಲ್ಲಿರುವ ತರಕಾರಿಯ ಹೆಸರೇನು?
ಇಲ್ಲಿ ಎಷ್ಟು ಕಾಯಿಗಳಿವೆ?

## (ಪಾಠ – ೪ : ಪಾಠಪೂರ್ವ ಚಟುವಟಿಕೆ)

ಅ) ಈ ಚಿತ್ರಗಳಿಗೆ ಬಣ್ಣ ತುಂಬಲು ತಿಳಿಸಿ.






# ಹೂದೋಟ (ಗದ್ಯ)




– ಸಮಿತಿ ರಚನೆ

(ಈ ಪಾಠದಲ್ಲಿರುವ ಸಂಭಾಷಣೆಯನ್ನು ಓದಿ ಹೇಳಿ, ಮಕ್ಕಳಿಂದ ಹೇಳಿಸಿ)




**ಸುಮಾ** : ಅಜ್ಜೀ, ನೀವು ದಿನಾಲೂ ಸಂಜೆ ಹೂದೋಟಕ್ಕೆ ಬರುತ್ತೀರಿ ಅಲ್ಲವೆ?

**ಅಜ್ಜಿ** : ಹೌದು ಮಗು, ಹೂದೋಟಕ್ಕೆ ಬರಲು ನನಗೆ ತುಂಬಾ ಇಷ್ಟ.

**ಸುಮಾ** : ಅಜ್ಜಿ, ಇಲ್ಲಿ ಹಲವಾರು ಮಂದಿ ನಡೆಯುತ್ತಾರಲ್ಲ, ಏಕೆ?

**ಅಜ್ಜಿ** : ನಡೆಯುವುದು ದೇಹಕ್ಕೆ ಒಳ್ಳೆಯ ವ್ಯಾಯಾಮ. ಈ ವ್ಯಾಯಾಮ ಆರೋಗ್ಯಕ್ಕೆ ಅಗತ್ಯ.



**ಸುಮಾ** : ಅಜ್ಜಿ, ಅಲ್ಲಿ ಜೋಕಾಲಿ ಇದೆ, ನಾನು ಹೋಗಿ ಸ್ವಲ್ಪ ಹೊತ್ತು ಜೋಕಾಲಿ ಆಡಲೇ?

**ಅಜ್ಜಿ** : ಆಡು ಮಗು. ನಾನು ಸ್ವಲ್ಪ ನಡೆದಾಡಿ ಬರುತ್ತೇನೆ.

(ಸ್ವಲ್ಪ ಸಮಯದ ಬಳಿಕ)

**ಅಜ್ಜಿ** : ಜೋಕಾಲಿ ಆಡಿದ್ದು ಆಯಿತೆ ಮಗು?

**ಸುಮಾ** : ಆಯಿತು ಅಜ್ಜಿ, ನಿಮ್ಮ ನಡೆದಾಟ ಆಯಿತೇ?

**ಅಜ್ಜಿ** : ಆಯಿತು ಮಗು, ಈಗ ಮನೆಗೆ ಹೋಗೋಣವೇ?

**ಸುಮಾ** : ಅಜ್ಜಿ, ನಾನು ದಿನಾಲೂ ನಿಮ್ಮ ಜೊತೆ ಹೂದೋಟಕ್ಕೆ ಬರುವೆ.

**ಅಜ್ಜಿ** : ನೀನು ತುಂಬಾ ಜಾಣೆ, ಮಕ್ಕಳು ಚಿಕ್ಕಂದಿನಿಂದಲೇ ಇಂಥ ಒಳ್ಳೆಯ ಅಭ್ಯಾಸಗಳನ್ನು ಬೆಳೆಸಿಕೊಳ್ಳುವುದು ಒಳ್ಳೆಯದು.

**ಕೇಳಿದ ಪದಗಳು :**

ಅಜ್ಜಿ, ದಿನಾಲೂ, ಸಂಜೆ, ನೀವು, ಹೂದೋಟ, ಹೌದು, ಮಗು, ಹಲವಾರು, ಮಂದಿ, ನಡೆ, ದೇಹ, ಒಳ್ಳೆಯ, ವ್ಯಾಯಾಮ, ಆರೋಗ್ಯ, ಅಗತ್ಯ, ಜೋಕಾಲಿ, ನಡೆದಾಟ, ಅಭ್ಯಾಸ, ಜಾಣೆ.

**ಪದಗಳ ಅರ್ಥ :**

ದಿನಾಲೂ–ಪ್ರತಿದಿನ ; ಜೋಕಾಲಿ–ಉಯ್ಯಾಲೆ, ತೂಗುಮಣೆ.



## ಅಭ್ಯಾಸ

**ಅ) ಪಾಠದ ವಾಕ್ಯಗಳನ್ನು ಕೆಳಗೆ ನೀಡಿದೆ. ಬಿಟ್ಟಿರುವ ಪದವನ್ನು ಸೇರಿಸಿ ಮಕ್ಕಳಿಂದ ಹೇಳಿಸಿ.**

೧) ಹೂದೋಟಕ್ಕೆ ಬರಲು ನನಗೆ ____________ ಇಷ್ಟ.

೨) ನಾನು ಹೋಗಿ ಸ್ವಲ್ಪ ಹೊತ್ತು ____________ ಆಡಲೇ?



೩) ನಿಮ್ಮ ______________ ಆಯಿತೇ?

೪) ನೀನು ತುಂಬಾ ______________

**ಆ) ಮಕ್ಕಳಿಗೆ ಪ್ರಶ್ನೆ ಕೇಳಿ, ಉತ್ತರ ಹೇಳಿಸಿ.**

೧) ಅಜ್ಜಿ ದಿನಾಲು ಸಂಜೆ ಎಲ್ಲಿಗೆ ಹೋಗುತ್ತಿದ್ದರು?

೨) ದೇಹಕ್ಕೆ ಒಳ್ಳೆಯ ವ್ಯಾಯಾಮ ಯಾವುದು?

೩) ಸುಮಾ ಯಾವ ಆಟ ಆಡಿದಳು?

**ಇ) ಯಾರು ಯಾರಿಗೆ ಹೇಳಿದರು/ಕೇಳಿದರು ಎಂದು ಮಕ್ಕಳನ್ನು ಕೇಳಿ, ಉತ್ತರ ಪಡೆಯಿರಿ.**



೧) ಅಜ್ಜೀ, ನೀವು ದಿನಾಲೂ ಸಂಜೆ ಹೂದೋಟಕ್ಕೆ ಬರುತ್ತೀರಿ ಅಲ್ಲವೆ ?
**– ಎಂದು ಕೇಳಿದವರು ಯಾರು?**

೨) ನಡೆಯುವುದು ದೇಹಕ್ಕೆ ಒಳ್ಳೆಯ ವ್ಯಾಯಾಮ. ಈ ವ್ಯಾಯಾಮ ಆರೋಗ್ಯಕ್ಕೆ ಅಗತ್ಯ. **– ಎಂದು ಹೇಳಿದವರು ಯಾರು?**

೩) ಮಕ್ಕಳು ಚಿಕ್ಕಂದಿನಿಂದಲೂ ಇಂಥ ಒಳ್ಳೆಯ ಅಭ್ಯಾಸಗಳನ್ನು ಬೆಳೆಸಿಕೊಳ್ಳುವುದು ಒಳ್ಳೆಯದು. **– ಎಂದು ಹೇಳಿದವರು ಯಾರು ?**

**ಈ) ಈ ಕೆಳಗಿನ ವಾಕ್ಯಗಳನ್ನು ಓದಿ ಹೇಳಿ, ಮಕ್ಕಳಿಂದ ಹೇಳಿಸಿ.**

೧) ನಾನು <u>ದಿನಾಲೂ</u> ಸ್ನಾನ ಮಾಡುತ್ತೇನೆ.

೨) ನಮ್ಮ ಊರಿನಲ್ಲಿ <u>ಹಲವಾರು</u> ಮನೆಗಳಿವೆ.

೩) ನನ್ನ ಗೆಳತಿ <u>ತುಂಬಾ</u> ಜಾಣೆ.



ಉ) ಚಿತ್ರಗಳಲ್ಲಿರುವ ಹೂಗಳನ್ನು ಹೆಸರಿಸಲು ಹೇಳಿ.
















## (ಪಾಠ ೬ : – ಪಾಠಪೂರ್ವ ಚಟುವಟಿಕೆ)

**ಅ) ಚಿತ್ರಕ್ಕೆ (ಕೇಸರಿ ಮತ್ತು ಹಸಿರು) ಬಣ್ಣ ಹಾಕಲು ಹೇಳಿ.**

ಕೇಸರಿ →



ಹಸಿರು →



**ಆ) ಮಕ್ಕಳಿಗೆ ಇಷ್ಟವಾದ ಬಣ್ಣದಿಂದ ಚಿತ್ರ ತುಂಬಿಸಲು ಹೇಳಿ.**







ಪಾಠ ೬

# ಬೇಸಿಗೆ ರಜೆಯಲಿ (ಪದ್ಯ)




– ಕವಿ : ವಿದ್ಯಾಸಾಗರ ಕುಕ್ಕುಂದಾ

(ಪದ್ಯವನ್ನು ಹಾಡಿ, ಮಕ್ಕಳಿಂದ ಹಾಡಿಸಿ)



ಬೇಸಿಗೆ ರಜೆಯಲಿ
ಅಪ್ಪನ ಜೊತೆ ನಾ
ಹಳ್ಳಿಗೆ ಹೋಗುವೆನು

ಬೆವರನು ಸುರಿಸುವ
ರೈತರ ಜೊತೆಯಲಿ
ನಾನೂ ದುಡಿಯುವೆನು

ಮುಗಿಲನೆ ಮುಟ್ಟುವ
ಎತ್ತರ ದನಿಯಲಿ
ಹಾಡನು ಹೇಳುವೆನು

ಜಗದಲಿ ನಡೆದಿಹ
ಕೌತುಕ ವಿಷಯವ
ಅವರಿಗೆ ತಿಳಿಸುವೆನು



ತೋಟದಿ ಬೆಳೆದಿಹ
ಬಗೆ ಬಗೆ ಹಣ್ಣಿನ
ಸವಿಯನು ಸವಿಯುವೆನು

ಹಚ್ಚನೆ ಹಸುರಿನ
ಸುಂದರ ಸೃಷ್ಟಿಯ
ಸೊಬಗನು ಕಾಣುವೆನು!





**ಕೇಳಿದ ಪದಗಳು :**

ಬೇಸಿಗೆ, ರಜೆ, ಹಳ್ಳಿ, ಬೆವರು, ರೈತ, ದುಡಿ, ಮುಗಿಲು, ಎತ್ತರ, ದನಿ, ಹಾಡು, ಜಗ, ಕೌತುಕ, ವಿಷಯ, ತೋಟ, ಹಣ್ಣು, ಸವಿ, ಹಚ್ಚನೆ, ಸುಂದರ, ಸೃಷ್ಟಿ, ಸೊಬಗು.

**ಪದಗಳ ಅರ್ಥ :**

ರೈತ – ಕೃಷಿಕ

ಮುಗಿಲು – ಆಕಾಶ

ಸವಿ – ರುಚಿ

ಸೊಬಗು – ಚಂದ

## ಅಭ್ಯಾಸ

**ಅ) ಪದ್ಯದ ಸಾಲುಗಳಲ್ಲಿ ಬಿಟ್ಟಿರುವ ಪದವನ್ನು ಮಕ್ಕಳಿಂದ ಹೇಳಿಸಿ.**

೧. ಅಪ್ಪನ ಜೊತೆ ನಾ ______ ಹೋಗುವೆನು.

೨. ಎತ್ತರ ದನಿಯಲಿ ______ ಹೇಳುವೆನು.

೩. ಬಗೆ ಬಗೆ ಹಣ್ಣಿನ ______ ಸವಿಯುವೆನು.

೪. ಸುಂದರ ಸೃಷ್ಟಿಯ ______ ಕಾಣುವೆನು.



**ಆ) ಮಕ್ಕಳಿಗೆ ಪ್ರಶ್ನೆ ಕೇಳಿ, ಉತ್ತರ ಹೇಳಿಸಿ.**

೧. ಕವಿಯು ಯಾರ ಜೊತೆ ದುಡಿಯುವನು?

೨. ಕೌತುಕ ವಿಷಯ ಎಲ್ಲಿ ನಡೆದಿದೆ?

೩. ಹಳ್ಳಿಗೆ ಯಾವಾಗ ಹೋಗಬೇಕು?



ಇ) 'ಅ', 'ಆ' ಮತ್ತು 'ಇ' ಪಟ್ಟಿಯಲ್ಲಿರುವ ಶಬ್ದಗಳನ್ನು ಜೋಡಿಸಿ ಕವಿತೆಯ ಸಾಲುಗಳನ್ನು ಪೂರ್ಣಗೊಳಿಸಿ.

| ಅ | ಆ | ಇ |
|---|---|---|
| ಬೇಸಿಗೆ ರಜೆಯಲಿ | ಕೌತುಕ ವಿಷಯವ | ಹಾಡನು ಹೇಳುವೆನು. |
| ತೋಟದಿ ಬೆಳೆದಿಹ | ಎತ್ತರ ದನಿಯಲಿ | ಅವರಿಗೆ ತಿಳಿಸುವೆನು. |
| ಜಗದಲಿ ನಡೆದಿಹ | ಅಪ್ಪನ ಜೊತೆ ನಾ | ಸವಿಯನು ಸವಿಯುವೆನು. |
| ಮುಗಿಲನೆ ಮುಟ್ಟುವ | ಬಗೆ ಬಗೆ ಹಣ್ಣಿನ | ಹಳ್ಳಿಗೆ ಹೋಗುವೆನು. |

ಈ) ಕೆಳಗಿನ ಸಾಲುಗಳನ್ನು ಮಕ್ಕಳಿಗೆ ಹೇಳಿ, ಅವರಿಂದ ಹೇಳಿಸಿ.

೧. ಬೇಸಿಗೆ ರಜೆಯಲ್ಲಿ ಹಳ್ಳಿಗೆ ಹೋಗಬೇಕು.

೨. ರೈತನು ಬೆವರು ಸುರಿಸಿ ದುಡಿವನು.

೩. ಜಗದಲಿ ಕೌತುಕ ವಿಷಯಗಳು ನಡೆದಿವೆ.

೪. ತೋಟದಲ್ಲಿ ಬಗೆ ಬಗೆ ಹಣ್ಣುಗಳಿವೆ.

೫. ಸೃಷ್ಟಿಯು ಹಚ್ಚನೆ ಹಸುರಾಗಿದೆ.

೬. ಹಾಡನು ಎತ್ತರದ ದನಿಯಲಿ ಹಾಡಬೇಕು.







## (ಪಾಠ – ೭ : ಪಾಠಪೂರ್ವ ಅಭ್ಯಾಸ)

**ಅ) ಚಿತ್ರಗಳನ್ನು ತೋರಿಸಿ, ಪಕ್ಕದಲ್ಲಿರುವ ಪ್ರಶ್ನೆಗಳನ್ನು ಕೇಳಿ, ಮಕ್ಕಳಿಂದ ಉತ್ತರ ಪಡೆಯಿರಿ.**



ಈ ಪ್ರಾಣಿಯ ಹೆಸರೇನು?



ಈ ಪ್ರಾಣಿಯ ಹೆಸರೇನು?





ಈ ಚಿತ್ರದಲ್ಲಿರುವುದೇನು?



ಈ ಚಿತ್ರದಲ್ಲಿರುವುದೇನು?





ಪಾಠ ೭

# ಕೋತಿ ಮತ್ತು ಅಳಿಲು (ಗದ್ಯ)




– ಸಮಿತಿ ರಚನೆ

(ಪಾಠವನ್ನು ಓದಿ ಹೇಳಿ, ಮಕ್ಕಳಿಂದ ಹೇಳಿಸಿ)





ಒಂದು ಕೋತಿ ಮರದ ಮೇಲೆ ಕುಳಿತಿತ್ತು. ಆ ಕೋತಿಯ ಬಾಲ ತುಂಬಾ ಉದ್ದವಿತ್ತು. ಅದು ನೆಲದವರೆಗೆ ನೇತಾಡುತ್ತಿತ್ತು.

ಒಂದು ಅಳಿಲು ಕುಣಿದಾಡುತ್ತಾ ಅಲ್ಲಿಗೆ ಬಂದಿತು. ಅದು ಕೋತಿಯ ಬಾಲ ನೋಡಿತು. “ಈ ಜೋಕಾಲಿ ಎಷ್ಟು ಚಂದ!” ಎಂದು ಯೋಚಿಸಿತು. ಕೋತಿಯ ಬಾಲ ಹಿಡಿದು ಅಳಿಲು ಜೀಕತೊಡಗಿತು.

ಕೋತಿಗೆ ಕಚಗುಳಿ ಆಯಿತು. ಅದು ಕೆಳಗೆ ನೋಡಿತು ಮತ್ತು ನಗುತ್ತಾ ಹೇಳಿತು, “ತಂಗಿ, ಏನು ಮಾಡುತ್ತಿರುವೆ? ನನಗೆ ಕಚಗುಳಿಯಾಗುತ್ತಿದೆ.” ಆಗ ಅಳಿಲಿಗೆ ಗಾಬರಿಯಾಯಿತು.



"ಮಂಗಣ್ಣಾ, ಇದು ನಿನ್ನ ಬಾಲವೇ? ಜೋಕಾಲಿ ಎಂದು ತಿಳಿದು ಜೀಕುತ್ತಿದ್ದೆ. ನನ್ನನ್ನು ಕ್ಷಮಿಸು" ಎಂದು ಹೇಳಿತು. ಬಾಲವನ್ನು ಬಿಟ್ಟಿತು.

ಅಳಿಲು ಓಡಿಹೋಗಿ, ಮರದ ಕೊಂಬೆಯನ್ನು ಏರಿತು.

**ಕೇಳಿದ – ಪದಗಳು :**

ಕೋತಿ, ಮರ, ಮೇಲೆ, ಕುಳಿತಿರು, ಬಾಲ, ಉದ್ದ, ಅದು, ನೆಲ, ನೇತಾಡು, ಅಳಿಲು, ಕುಣಿದಾಡು, ಅಲ್ಲಿಗೆ, ಬಂದಿತು, ನೋಡು, ಜೋಕಾಲಿ, ಎಷ್ಟು, ಚಂದ, ಯೋಚಿಸು, ಜೀಕು, ಕಚಗುಳಿ, ಆಯಿತು, ಕೆಳಗೆ, ನಗು, ಹೇಳು, ತಂಗಿ, ಏನು, ಮಾಡು, ಗಾಬರಿ, ಮಂಗಣ್ಣಾ, ಇದು, ತಿಳಿ, ಕ್ಷಮಿಸು, ಆಗು, ಬಿಡು.

**ಪದಗಳ ಅರ್ಥ :**

ಗಾಬರಿ–ಹೆದರಿಕೆ; ಕ್ಷಮಿಸು–ಅಪರಾಧವನ್ನು ಮನ್ನಿಸು.

## ಅಭ್ಯಾಸ



**ಅ) ಈ ವಾಕ್ಯಗಳಲ್ಲಿನ ಬಿಟ್ಟಿರುವ ಪದವನ್ನು ಮಕ್ಕಳಿಂದ ಹೇಳಿಸಿ.**

೧) ಆ ಕೋತಿಯ ಬಾಲ ______ ಉದ್ದವಿತ್ತು.

೨) ಒಂದು ಅಳಿಲು __________ ಅಲ್ಲಿಗೆ ಬಂದಿತು.

೩) ಕೋತಿಗೆ _________ ಆಯಿತು.

೪) ಮಂಗಣ್ಣಾ, ಇದು _____ ಬಾಲವೇ?

**ಆ) ಮಕ್ಕಳಿಗೆ ಪ್ರಶ್ನೆ ಕೇಳಿ, ಉತ್ತರ ಹೇಳಿಸಿ.**

೧) ಕೋತಿ ಯಾವುದರ ಮೇಲೆ ಕುಳಿತಿತ್ತು?

೨) ಕೋತಿಯ ಬಾಲ ಹಿಡಿದು ಯಾವುದು ಜೀಕತೊಡಗಿತು?



೩) “ಮಂಗಣ್ಣಾ ಇದು ನಿನ್ನ ಬಾಲವೇ? ಜೋಕಾಲಿ ಎಂದು ತಿಳಿದು ಜೀಕುತ್ತಿದ್ದೆ. ನನ್ನನ್ನು ಕ್ಷಮಿಸು” ಎಂದು ಯಾವುದು ಹೇಳಿತು?

೪) ಅಳಿಲು ಹೇಗೆ ಹೋಗಿ ಮರದ ಕೊಂಬೆಯನ್ನು ಏರಿತು?

**ಇ) ಮಾದರಿಯಂತೆ ವಾಕ್ಯಗಳನ್ನು ಮಾಡಿ ಮಕ್ಕಳಿಂದ ಹೇಳಿಸಿ.**

**ಮಾದರಿ :** **ಕೋತಿ, ಮರ, ಬಾಲ**

೧) ಕೋತಿ ಒಂದು ಪ್ರಾಣಿ.

೨) ಕೋತಿಯು ಮರವನ್ನು ಹತ್ತುತ್ತದೆ.

೩) ಕೋತಿಗೆ ಬಾಲವಿದೆ.



**ಈ) ಈ ಪದಗಳನ್ನು ಮಕ್ಕಳಿಂದ ಹೇಳಿಸಿ.**

**ಅಳಿಲು, ಮರ, ಬಾಲ**








## ಓದಿಸಿ-ಬರೆಯಿಸಿ

# ಪದ ಓದು - ಅಕ್ಷರ ಕಲಿ




- ಸಮಿತಿ ರಚನೆ

## ಅಕ್ಷರಾಭ್ಯಾಸ-೧

| | | | | |
|---|---|---|---|---|
| ರ | ಗ | ಸ | ದ | ಅ |

ಅ) ಚಿತ್ರ ತೋರಿಸಿ ಪದ ಹೇಳಿಸಿ.

| | | |
|---|---|---|
| ರ | | ರಸ |
| ಗ | | ಗರಗಸ |
| ಸ | | ಸರ |
| ದ | | ದಸರ |
| ಅ | | ಅರ |





**ಈ) ಈ ಪದಗಳನ್ನು ಓದಿಸಿ.**

ಅರ ಗರ ಸರ ರಸ ದರ

ಸಗರ ದಸರ ಅರಸ ಸರಸ ಸದರ

ಗರಗರ ಗರಗಸ ಸರಸರ ದರದರ

**ಉ) ಅಡಿಗೆರೆ ಎಳೆದಿರುವ ಅಕ್ಷರಗಳನ್ನು ಗುರುತಿಸಲು ಮತ್ತು ಸ್ಪಷ್ಟವಾಗಿ ಉಚ್ಚರಿಸಲು ಹೇಳಿ.**

ದಸರ ಗರಗಸ ರಸ ದರ ಅರ

**ಊ) ಬಿಟ್ಟಿರುವ ಅಕ್ಷರಗಳನ್ನು ಆವರಣದಲ್ಲಿ ನೀಡಿರುವ ಅಕ್ಷರಗಳಲ್ಲಿ ಸೂಕ್ತವಾದುದನ್ನು ಗುರುತಿಸಿ ಹೇಳಿಸಿ ಮತ್ತು ಬರೆಯಿಸಿ.**

೧) ಗ ___ ಗಸ (ರ, ದ, ಅ)

೨) ಸ ___ ರ (ರ, ಗ, ಸ)

೩) ಅರ ___ (ರ, ಸ, ದ)

೪) ___ ಸರ (ಸ, ದ, ಗ)

೫) ___ ರ (ಸ, ಗ, ರ)





೩ಙ) 'ಅ' ಪಟ್ಟಿಯಲ್ಲಿ ಚಿತ್ರಗಳನ್ನೂ, 'ಆ' ಪಟ್ಟಿಯಲ್ಲಿ ಪದಗಳನ್ನು ಕೊಟ್ಟಿದೆ. ಚಿತ್ರಕ್ಕೆ ಹೊಂದುವ ಪದವನ್ನು ಗುರುತಿಸಿ, ಹೇಳಿಸಿ ಮತ್ತು ಚಿತ್ರದ ಕೆಳಗೆ ಬರೆಯಿಸಿ.

| 'ಅ' ಪಟ್ಟಿ | 'ಆ' ಪಟ್ಟಿ |
| --- | --- |
|  | ಸರ |
|  | ಗರಗಸ |
|  | ಅರ |
|  | ರಸ |



ಎ) ಪದಗಳ ಅರ್ಥ ತಿಳಿಯಿರಿ :

ದಸರ–ಒಂದು ಹಬ್ಬ; ಅರ–ಉಕ್ಕಿನ ಉಪಕರಣ; ಸಗರ–ಒಂದು ಹೆಸರು; ಗರಗಸ–ಮರ ಕೊಯ್ಯುವ ಸಾಧನ.

# ಅಕ್ಷರಾಭ್ಯಾಸ-೨

| ಜ | ವ | ಮ | ಬ | ನ |
|---|---|---|---|---|

ಅ) ಚಿತ್ರ ತೋರಿಸಿ ಪದ ಹೇಳಿಸಿ.

ಜ



ಜನ

ವ



ವನ

ಮ



ಮರ

ಬ



ಬಸವ

ನ



ನಗರ





ಆ) **ಕೊಟ್ಟಿರುವ ಅಕ್ಷರಗಳನ್ನು ಗುಂಡಾಗಿ ಬರೆಯಿಸಿ.**

| | | | | |
|---|---|---|---|---|
| ಜ | ಜ | ಜ | ಜ | ಜ |
| | | | | |
| ವ | ವ | ವ | ವ | ವ |
| | | | | |
| ಮ | ಮ | ಮ | ಮ | ಮ |
| | | | | |
| ಬ | ಬ | ಬ | ಬ | ಬ |
| | | | | |
| ನ | ನ | ನ | ನ | ನ |
| | | | | |





ಇ) ಈ ಅಕ್ಷರಗಳನ್ನು ಗುಂಡಾಗಿ ನಕಲು ಮಾಡಿಸಿ.

ಜ ವ ಮ ಬ ನ

ಈ) ಈ ಪದಗಳನ್ನು ಸ್ಪಷ್ಟವಾಗಿ ಉಚ್ಚರಿಸಲು ಹೇಳಿ.

| | | |
|---|---|---|
| ಜನ | ಜವ | ಜಗ |
| ವನ | ವರ | ವನಜ |
| ಮನ | ಮರ | ಮಗ |
| ಬನ | ಬರ | ನವ |
| ನರ | ನಗ | ಅಜ |



ಉ) ಅಡಿಗೆರೆ ಎಳೆದಿರುವ ಅಕ್ಷರಗಳನ್ನು ಗುರುತಿಸಲು ಮತ್ತು ಸ್ಪಷ್ಟವಾಗಿ ಉಚ್ಚರಿಸಲು ಹೇಳಿ.

| | | | |
|---|---|---|---|
| ಜನ | ವನ | ಮರ | ಬಸವ |
| ನಗರ | ಗಗನ | ದಸರ | ಸರಸ |
| ದವಸ | ಅವಸರ | | |



ಊ) ನೀಡಿರುವ ಪದಗಳಲ್ಲಿ ಬಿಟ್ಟಿರುವ ಅಕ್ಷರವನ್ನು ಆವರಣದಲ್ಲಿರುವ ಅಕ್ಷರಗಳಿಂದ ಗುರುತಿಸಿ ಹೇಳಿಸಿ ಮತ್ತು ಬರೆಯಿಸಿ.

೧) ಗ ___ (ಜ , ಅ, ವ)

೨) ಬಸ ___ (ಜ, ವ, ಅ)

೩) ರ ___ (ವ, ಬ, ಸ)

೪) ___ ರ (ಬ, ರ, ಜ)

೫) ಜ ___ (ನ, ಅ, ಬ)

ಋ) ಪದಗಳ ಅರ್ಥ :

ದವಸ–ಧಾನ್ಯ, ಕಾಳುಕಡ್ಡಿ; ಅವಸರ–ಆತುರ; ವನಜ–ತಾವರೆ; ಬನ–ವನ; ನವ–ಒಂಬತ್ತು, ಹೊಸತು; ನರ–ಮನುಷ್ಯ; ನಗ–ಒಡವೆ.



ಎ) ಬಣ್ಣ ಹಚ್ಚಿ.





## ಅಕ್ಷರಾಭ್ಯಾಸ–೩

| ಪ | ಯ | ಉ | ಡ | ಟ | ಚ |
|---|---|---|---|---|---|

ಅ) ಚಿತ್ರ ತೋರಿಸಿ ಪದ ಹೇಳಿಸಿ.

| | | |
|---|---|---|
| ಪ<br>ಪಟ | ಯ<br>ಯಮ | ಉ<br>ಉಡ |
| ಡ<br>ಡಮಡಮ | ಟ<br>ಟಪಟಪ | ಚ<br>ಚಮಚ |





ಆ) ಕೊಟ್ಟಿರುವ ಅಕ್ಷರಗಳನ್ನು ಗುಂಡಾಗಿ ನಕಲು ಮಾಡಿಸಿ.

| | | | | |
|---|---|---|---|---|
| ಪ | ಪ | ಪ | ಪ | ಪ |
| ಪ | | | | |
| ಯ | ಯ | ಯ | ಯ | ಯ |
| ಯ | | | | |
| ಉ | ಉ | ಉ | ಉ | ಉ |
| ಉ | | | | |
| ಡ | ಡ | ಡ | ಡ | ಡ |
| ಡ | | | | |
| ಟ | ಟ | ಟ | ಟ | ಟ |
| ಟ | | | | |
| ಚ | ಚ | ಚ | ಚ | ಚ |
| ಚ | | | | |





## ಇ) ಕೊಟ್ಟಿರುವ ಅಕ್ಷರಗಳನ್ನು ಗುಂಡಾಗಿ ನಕಲು ಮಾಡಿಸಿ.

**ಪ ಯ ಉ ಡ ಟ ಚ**

## ಈ) ಈ ಪದಗಳನ್ನು ಸ್ಪಷ್ಟವಾಗಿ ಉಚ್ಚರಿಸಲು ಹೇಳಿ.

| | | | |
|---|---|---|---|
| ಪದ | ಪಟ | ಜಪ | ಪಚನ |
| ಪದರ | ನಯ | ಜಯ | ನಯನ |
| ಉಡ | ಉದಯ | ಉರಗ | ಉರ |
| ಡಬಡಬ | ಡವಡವ | ನಟ | ನ ’ಟನ |
| ಟಪಟಪ | ಚರ | ಚದರ | ವಚನ |

## ಉ) ಕೆಳಗೆ ನೀಡಿರುವ ಪದಗಳನ್ನು ಸ್ಪಷ್ಟವಾಗಿ ಉಚ್ಚರಿಸಿ ಬರೆಯಲು ಹೇಳಿ.

**ಪದ ಯಮ ಉಡ ಜಡ ಪಟ ಚರ**





ಜಪ ನಯ ಉರ ಚಮಚ

---

---

---

---

---

---

ಊ) ಪದಗಳಲ್ಲಿ ಬಿಟ್ಟಿರುವ ಅಕ್ಷರವನ್ನು ಆವರಣದಲ್ಲಿ ನೀಡಲಾಗಿದೆ. ಸೂಕ್ತ ಅಕ್ಷರವನ್ನು ಗುರುತಿಸಿ, ಹೇಳಿಸಿ ಮತ್ತು ಬರೆಯಿಸಿ.

೧) ____ ಟ (ಡ , ಪ, ಯ)

೨) ನ ____ ನ (ಚ, ಪ, ಯ)

೩) ____ ರ ಗ (ಉ, ಯ, ಚ)

೪) ಬ ____ ವ (ಬ, ಸ, ಜ)

೫) ಉ ____ ಯ (ಡ, ದ, ಟ)

೬) ವ ____ ನ (ಉ, ಚ, ಯ)



ಋ) ಪದಗಳ ಅರ್ಥ ತಿಳಿಯಿರಿ :

ಪಟ–ಗಾಳಿಪಟ ; ಪಚನ–ಅರಗುವಿಕೆ ; ನಯನ–ಕಣ್ಣು ; ಉದಯ–ಬೆಳಗು;
ಉರಗ–ಹಾವು ; ಉರ–ಎದೆ ; ವಚನ–ಮಾತು.



## ಅಕ್ಷರಾಭ್ಯಾಸ–೪

| ಲ | ಈ | ಊ | ಕ |
|---|---|---|---|

ಅ) ಚಿತ್ರ ತೋರಿಸಿ ಪದ ಹೇಳಿಸಿ.

ಲ




ಈ



ಈಚಲ

ಊ



ಊಟ

ಕ



ಕಡಗ

ಆ) ಕೊಟ್ಟಿರುವ ಅಕ್ಷರಗಳನ್ನು ಗುಂಡಾಗಿ ನಕಲು ಮಾಡಿಸಿ.

| | | | | |
|---|---|---|---|---|
| ಲ | ಲ | ಲ | ಲ | ಲ |
| ಲ | | | | |
| | | | | |
| ಈ | ಈ | ಈ | ಈ | ಈ |
| ಈ | | | | |
| | | | | |
| ಊ | ಊ | ಊ | ಊ | ಊ |
| ಊ | | | | |
| | | | | |
| ಕ | ಕ | ಕ | ಕ | ಕ |
| ಕ | | | | |
| | | | | |





ಇ) ಅಕ್ಷರಗಳನ್ನು ಗುಂಡಾಗಿ ನಕಲು ಮಾಡಿಸಿ.

# ಲ ಈ ಊ ಕ

ಈ) ಈ ಪದಗಳನ್ನು ಸ್ಪಷ್ಟವಾಗಿ ಉಚ್ಚರಿಸಲು ಹೇಳಿ.

| | | | | |
|---|---|---|---|---|
| ಲವ | ಅಗಲ | ಕಲರವ | ಲಕಲಕ | ಈಗ |
| ಈರ | ಈಚಲ | ಊಟ | ಊನ | ಕದ |
| ಕರ | ಕದನ | ಕರಗ | ಕಟಕ | ಕರಟ |

ಉ) ಕೆಳಗಿರುವ ಪದಗಳನ್ನು ಸ್ಪಷ್ಟವಾಗಿ ಉಚ್ಚರಿಸಲು ಹೇಳಿ ಮತ್ತು ಬರೆಯಿಸಿ.

ಅಗಲ ಈರ ಊಟ ಕಮಲ





ಊ) ಕೆಳಗೆ ನೀಡಿರುವ ಪದಗಳಲ್ಲಿ ಬಿಟ್ಟಿರುವ ಅಕ್ಷರಗಳನ್ನು ಸೇರಿಸಿ ಹೇಳಿಸಿ ಮತ್ತು ಬರೆಯಿಸಿ.

೧) _____ ವ

೨) ______ ರ

೩) _____ ಮಲ

೪) _____ ಕ ____ ಕ

೫) ____ ಗ

೬) ____ ಟ

೭) ____ ದನ

ಋ) ಕೆಳಗೆ ನೀಡಿರುವ ಪದಗಳಲ್ಲಿ ಬಿಟ್ಟಿರುವ ಅಕ್ಷರಗಳನ್ನು ಆವರಣದಲ್ಲಿ ಕೊಡಲಾಗಿದೆ. ಸೂಕ್ತ ಅಕ್ಷರವನ್ನು ಗುರುತಿಸಿ ಹೇಳಿಸಿ ಮತ್ತು ಬರೆಯಿಸಿ.

೧) _____ ದ (ಕ, ಅ, ಊ)

೨) _____ ಗ (ಕ, ಈ, ಅ)

೩) _____ ಟಕ (ಕ, ಈ, ಅ)

೪) _____ ರಟ (ಈ, ಕ, ಅ)



ಎ) ಚಿತ್ರ ಪೂರ್ತಿ ಮಾಡಿ ಬಣ್ಣ ಹಚ್ಚಲು ತಿಳಿಸಿ.





